







# ಚಂದಮಾಮ

(ಫೆಬ್ರವರಿ–'೭೮) ಈ ಸಂಚಿಕೆಯಲ್ಲಿ





Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI. CHANDAMAMA is published monthly and distributed in U.S.A. by Chandamama Distributors, West Chester PA 19380. Subscription 1 year $ 6-50. Second Class Postage paid at West Chester, PA

# ಚಂದಮಾಮ

ಸಂಸ್ಥಾಪಕರು : ‘ ಚಕ್ರಪಾಣಿ ’
ಸಂಚಾಲಕರು : ನಾಗಿರೆಡ್ಡಿ

ಸ್ತ್ರೀ ಪುರುಷರ ನಡುವೆ ಪ್ರೇಮವಿದ್ದರೆ ಅದು ಅವರಿಗೆ ಮಾತ್ರ ಸಂಬಂಧಿಸಿದ ವಿಷಯ. ಆದರೆ ಮಾನವನಿಗೆ ಸಮಾಜದಲ್ಲಿ ಅನೇಕ ರೀತಿಯ ಬಂಧನಗಳಿವೆ. ಅವುಗಳನ್ನು ಕಡಿದುಕೊಳ್ಳುವವನು ಸಾಮಾಜಿಕ ನೀತಿಯನ್ನು ಉಲ್ಲಂಘಿಸಿದವನಾಗುತ್ತಾನೆ. ಆದುದರಿಂದ ಸಾಮಾಜಿಕ ಬಂಧನಗಳಿಗೆ ಒಳಪಡಬೇಕಾದುದೂ ಮಾನವನ ಕರ್ತವ್ಯವೇ. ಪ್ರೇಮಕ್ಕಾಗಿ ಸಾಮಾಜಿಕ ಬಂಧನಗಳನ್ನು ತ್ಯಾಗ ಮಾಡಿದವನು ಉತ್ತಮ ಮಾನವನೆಂದು ಹೇಳಲು ಸಾಧ್ಯವಿಲ್ಲ. ಈ ಸಂಚಿಕೆಯ "ಕಡುಗಲಿಯ ಸೋಲು" ಎಂಬ ಬೇತಾಳ ಕಥೆಯಲ್ಲಿಯ ಮಣಿಮೇಖಲೆ ಮೇಲಿನ ಸತ್ಯವನ್ನು ತಿಳಿದು ಅದನ್ನು ಪಾಲಿಸಿದ್ದಾಳೆ. ಆದುದರಿಂದ ಅವಳನ್ನು ಗೆದ್ದುಕೊಂಡ ಕಡುಗಲಿಯಾದ ವಿಜಯಸಿಂಹನು, ಕಡೆಗೆ ಅವಳಿಂದಲೇ ಪಾಠ ಕಲಿತುಕೊಳ್ಳಬೇಕಾಯಿತು.

ಸಂಪುಟ : ೬೦ ಫಿಬ್ರುವರಿ '೭೮ ಸಂಚಿಕೆ : ೨

ಬಿಡಿ ಪ್ರತಿ ರೂ. ೧–೨೫ :: ವಾರ್ಷಿಕ ಚಂದಾ ರೂ. ೧೫–೦೦











ಸಂಶ್ರುತ್ಯ ಶೈಬ್ಯ ಶ್ಯೈನಾಯ
ಸ್ವಾಂ ತನುಂ ಜಗತೀಪತಿಃ
ಪ್ರದಾಯ ಪಕ್ಷಿಣೇ ರಾಜನ್
ಜಗಾಮ ಗತಿಮುತ್ತಮಾಮ್ ೧.

ರಾಜಾ, ಶೈಬ್ಯನೆಂಬ ರಾಜ (ಕೊಟ್ಟ ಮಾತಿಗಾಗಿ) ತನ್ನ ಶರೀರವನ್ನು ಹದ್ದಿಗೆ ಅರ್ಪಿಸಿ ಉತ್ತಮ ಲೋಕಗಳನ್ನು ಪಡೆದನು.

ತಥಾ ಹ್ಯಲರ್ಕ ಸ್ತೇಜಸ್ವೀ
ಬ್ರಾಹ್ಮಣೇ ವೇದಪಾರಗೇ
ಯಾಚಮಾನೇ ಸ್ವಕೇ ನೇತ್ರೇ
ಉದ್ಧೃತ್ಯ ಸುಮನಾ ದದೌ ೨.

ಹಾಗೆಯೇ ವೇದಪಾರಂಗತನಾದ ಬ್ರಾಹ್ಮಣನೊಬ್ಬ ಯಾಚಿಸಲು ಅಲರ್ಕನೆಂಬ ಮಹನೀಯನು ತನ್ನ ಕಣ್ಣುಗಳನ್ನು ಕಿತ್ತುಕೊಟ್ಟನು.

ಸರಿತಾಂ ತು ಪತಿ ಸ್ಸ್ವಲ್ಪಾಂ
ಮರ್ಯಾದಾಂ ಸತ್ಯಮನ್ವಿತಃ
ಸತ್ಯಾನುರೋಧಾ ತ್ಸಮಯೇ
ಸ್ವಾಂ ವೇಲಾಂ ನಾತಿವರ್ತತೇ ೩.



ನದಿಗಳಿಗೆಲ್ಲಾ ಅಧಿಪತಿಯಾದ ಸಮರ್ಥನಾದ ಸಮುದ್ರನು ಮಾತುಕೊಟ್ಟ ಕಾರಣಕ್ಕಾಗಿ ಎಂತಹ ಪರಿಸ್ಥಿತಿಯಲ್ಲಿಯೂ ತೀರವನ್ನು ಮೀರಬಾರನು.

---

ಕೊಟ್ಟ ಮಾತು

---



# ಕಾಕೋಲೂಕೀಯ

೫೫

ಕ್ರೂರಾಕ್ಷವು ಶಿಬಿಚಕ್ರವರ್ತಿಯ ಕಥೆಯನ್ನು ಹೇಳಿದ ಮೇಲೆ, ಅರಿಮರ್ದನವು ದೀಪ್ತಾಕ್ಷದ ಅಭಿಪ್ರಾಯವೇನೆಂದು ಕೇಳಿತು.

ಆಗ ದೀಪ್ತಾಕ್ಷವು "ನನ್ನನ್ನು ಕೇಳುವುದಾದರೆ ಮನಸ್ಸಿನ ಪರಿವರ್ತನೆಗೊಳಗಾದ ಕಾಗೆಯ ಸಹಾಯವನ್ನು ತೆಗದುಕೊಳ್ಳುವುದೇ ಒಳ್ಳೆಯದೆಂದು ಹೇಳುತ್ತೇನೆ. ಹಿಂದೆ ಒಬ್ಬ ಮುದುಕ ಮತ್ತು ಅವನ ಪ್ರಾಯದ ಪತ್ನಿಯ ನಡುವೆ ಬಂದ. ಕಳ್ಳನಿಂದ ಕೂಡಾ ಒಳಿತೇ ಆದುದು ಗೊತ್ತಿಲ್ಲವೇ ?" ಎಂದಿತು.

"ಅದೇನು ಕಥೆ ? ನಾನು ಕೇಳಿಲ್ಲವಲ್ಲಾ ?" ಎಂದು ಅರಿಮರ್ದನವು ಕೇಳಲು ದೀಪ್ತಾಕ್ಷವು ಆ ಕಥೆಯನ್ನು ಹೇಳಿತು :

ಶ್ರೀಮಂತನಾದ ವೃದ್ಧ ವರ್ತಕನೊಬ್ಬನಿದ್ದ. ನಲುವತ್ತು ವರ್ಷ ಅವನೊಂದಿಗೆ ಸಂಸಾರ ಮಾಡಿಕೊಂಡಿದ್ದ ಹೆಂಡತಿ ಸತ್ತುಹೋದ ಕೂಡಲೇ ಅವನು ಹದಿನಾರು ವಯಸ್ಸಿನ ಹುಡುಗಿಯೊಂದಿಗೆ ಮದುವೆ ಮಾಡಿಕೊಂಡನು. ಆ ಹುಡುಗಿಗಾಗಿ ಅವಳ ತಂದೆ ತಾಯಿಂದಿರಿಗೆ ಅವನು ತುಂಬಾ ಹಣ ಕೊಟ್ಟಿದ್ದನು. ಆದರೆ ಆ ಹುಡುಗಿಯ ಮನಸ್ಸು ಚೆದರಿ, ವೃದ್ಧನಾದ ಗಂಡನನ್ನು ಪ್ರೇಮಿಸಲಾಗದೆ, ದೂರ ದೂರ ಸರಿಯುತ್ತ, ತನಗೂ ಸುಖವಿಲ್ಲದೆ ಅವನಿಗೂ ಸುಖವಿಲ್ಲದೆ ಇದ್ದಳು.

ಒಂದು ದಿನ ರಾತ್ರಿ ಗಂಡ ಹೆಂಡಿರು ಮಲಗಿಕೊಂಡಿದ್ದರು. ಎಂದಿನಂತೆ ಅವಳು ಗಂಡನಿಗೆ ಬೆನ್ನು ಹಾಕಿ ತುಸು ದೂರದಲ್ಲಿ ಮಲಗಿದ್ದಳು. ಆ ಸಮಯದಲ್ಲಿ ಜಗಜಟ್ಟಿಯಂತಹ ಕಳ್ಳನೊಬ್ಬ ಅವರ ಮನೆಯೊಳಗೆ ಪ್ರವೇಶಿಸಿದ. ಹೆಂಡತಿ ಅವನನ್ನು ನೋಡಿ ಹೆದರಿ. ಒಮ್ಮಲೇ ಗಂಡನ ಬಳಿಗೆ ಜರುಗಿ ಗಟ್ಟಿಯಾಗಿ ಅಪ್ಪಿಹಿಡಿದಳು. ಆಕಸ್ಮಿಕವಾಗಿ ನಡೆದ ಈ ಸಂಘಟನೆಯಿಂದ ವರ್ತಕನಿಗೆ ಆನಂದಪುಲಕಿತವಾಗಿ ಆಶ್ಚರ್ಯವೆನಿಸಿತು.

"ಇಷ್ಟು ದಿನಗಳವರೆಗೆ ಇಲ್ಲದ ಹಾಗೆ ಈ ದಿನ ಹೀಗೇಕೆ ಮಾಡಿದಳು ?" ಎಂದುಕೊಳ್ಳುತ್ತ ಅವನು ಒಂದುಸಾರಿ ಸುತ್ತಲೂ ನೋಡಿದನು. ಆಗ ಮೂಲೆಯಲ್ಲಿ ನಿಂತಿದ್ದ ಕಳ್ಳ ಅವನ ಕಣ್ಣಿಗೆ ಬಿದ್ದ. "ಎಲೋ ಅಪ್ಪಾ, ನಿನಗೆ ಒಳ್ಳೇದಾಗಲಿ. ನನ್ನನ್ನು

ಮುಟ್ಟಲಿಕ್ಕೆ ಇಷ್ಟಪಡದವಳು ಈದಿನ ನಿನ್ನ ಪುಣ್ಯ ದಿಂದ ನನ್ನನ್ನು ತಾನಾಗಿ ಆಲಿಂಗಿಸಿದ್ದಾಳೆ. ಈ ಮನೆ ಯಲ್ಲಿ ನಿನಗೇನು ಬೇಕೋ ಅದನ್ನು ತೆಗೆದುಕೊಂಡು ಹೋಗು !" ಎಂದ ವರ್ತಕ ಕಳ್ಳನಿಗೆ.

ಕಳ್ಳನ ಮನಸ್ಸು ಕರಗಿತು. ಅವನು ವರ್ತಕ ನೊಂದಿಗೆ, "ಅಯ್ಯಾ, ನಾನು ನಿಮ್ಮ ಮನೆಯಿಂದ ಒಂದು ಕಡ್ಡಿಯನ್ನು ಕೂಡ ತೆಗೆದುಕೊಳ್ಳಲಾರೆ. ನಿಮಗೆ ಒಳ್ಳೆಯದಾದುದನ್ನು ನೋಡಿ ತುಂಬ ಸಂತೋಷವಾಯಿತು. ನಿಮ್ಮನ್ನು ಇವಳು ಹೀಗೆ ಗಾಢಾಲಿಂಗನ ಮಾಡಿಕೊಳ್ಳುವುದನ್ನು ಬಿಟ್ಟ ದಿನ ಮತ್ತೆ ಬರುತ್ತೇನೆ" ಎಂದು ಹೇಳಿ ಹೊರಟು ಹೋದನು.

ಈ ಕಥೆಯನ್ನು ಕೇಳಿದ ಮೇಲೆ ಅರಿಮರ್ದನವು ವಕ್ರನಾಸನ ಅಭಿಪ್ರಾಯವೇನೆಂದು ಕೇಳಿತು.

"ರಾಜಾ, ಈ ಕಾಗೆಯನ್ನು ಕೊಲ್ಲಬಾರದು. ಶತ್ರು ವಾದರೂ ತನ್ನ ನಾಯಕನೊಂದಿಗೆ ಅತೃಪ್ತಿಯಿಂದ ಬಂದವನ ಸಹಾಯ ತೆಗೆದುಕೊಳ್ಳುವುದರಿಂದ ತಪ್ಪೇನಿಲ್ಲ. ಒಬ್ಬ ಬ್ರಾಹ್ಮಣನ ಮನೆಗೆ ಬಂದ ಕಳ್ಳ ಮತ್ತು ರಾಕ್ಷಸರ ಕಥೆಯಲ್ಲಿ ಹಾಗೆ ತಾ ಆಯಿತು ?" ಎಂದಿತು ವಕ್ರನಾಸ.

"ಅದೆಂತಹ ಕಥೆ ?" ಎಂದು ಕೇಳಿತು ಅರಿ ಮರ್ದನ. ವಕ್ರನಾಸವು ಕಥೆಯನ್ನು ಹೇಳಿತು:

ಒಂದು ಗ್ರಾಮದಲ್ಲಿ ಒಬ್ಬ ಬಡ ಬ್ರಾಹ್ಮಣನಿದ್ದ. ಅವನು ಅವರಿವರು ಕೊಟ್ಟ ದಕ್ಷಿಣೆ ದುಡ್ಡಿನಿಂದಲೇ ಜೀವನಯಾತ್ರೆ ಸಾಗಿಸಿಕೊಂಡಿದ್ದ. ಯಾವ ಬಗೆಯ ಸುಖಗಳಿಗೂ ಅವನು ಪಡೆದು ಬಂದಿರಲಿಲ್ಲ. ಕ್ಷೌರ ಮಾಡಿಸಿಕೊಳ್ಳಲಿಕ್ಕೂ, ಉಗುರು ತೆಗೆಯಿಸಿಕೊಳ್ಳ ಲಿಕ್ಕೂ ಅವನ ಹತ್ತಿರ ಹಣವಿರಲಾರದು. ಬಿಸಿಲು, ಚಳಿ, ಮಳೆಗಳಿಂದ ಹತಿಗೊಂಡು ಬಹಳ ಒಣಗಿ ಹೋದ ಆ ಬಡ ಬ್ರಾಹ್ಮಣ.

ಒಂದು ದಿನ ಒಬ್ಬ ಧನಿಕ, ತನ್ನ ತಂದೆ ತೀರಿ ಹೋಗಲು ಉತ್ತರಕ್ರಿಯೆಗಳನ್ನು ನಡೆಸುವಾಗ, ಈ ಬ್ರಾಹ್ಮಣನಿಗೆ ಎರಡು ಕರುಗಳನ್ನು ದಾನಕೊಟ್ಟನು. ಬ್ರಾಹ್ಮಣನು ಅವುಗಳನ್ನು ಚೆಂದಾಗಿ ಮೇಯಿಸಿ



ಬೆಳೆಯಿಸುತ್ತಿರಲು, ಅವು ಉತ್ತಮ ದನಗಳಾದುವು. ತುಂಬ ಹಾಲು ಹೈನುಕೊಟ್ಟುವು. ಬ್ರಾಹ್ಮಣನ ಸ್ಥಿತಿ ಸುಧಾರಿಸಿತು. ದೇಹಕ್ಕೆ ಪುಷ್ಟಿಯೂ ಬಂದಿತು.

ಒಬ್ಬ ಕಳ್ಳ ಆ ದನಗಳ ಮೇಲೆ ಕಣ್ಣು ಹಾಕಿದ. ಅವುಗಳನ್ನು ಕದಿಯಲು ಆವನು ರಾತ್ರಿಯಲ್ಲಿ ಬ್ರಾಹ್ಮಣನ ಮನೆಯ ಸಮೀಪಕ್ಕೆ ಬಂದ. ಅಲ್ಲೊಂದು ಕಡೆ ರಾಕ್ಷಸನೊಬ್ಬ ಅಡಗಿ ನಿಂತಿರುವುದನ್ನು ನೋಡಿದ. ಆ ರಾಕ್ಷಸನ ಕೋರೆಗಳು ಉಗುರುಗಳೂ ಭಯಂಕರ ವಾಗಿದ್ದುವು. ಕಣ್ಣುಗಳು ದೊಡ್ಡವಾಗಿ ಗಲ್ಲಗಳು ಗುಳಿ ಬಿದ್ದುಕೊಂಡಿದ್ದುವು ರಾಕ್ಷಸನಿಗೆ.

ರಾಕ್ಷಸನನ್ನು ನೋಡಿ ಕಳ್ಳ ಹೆದರಿ, "ಅಯ್ಯಾ, ತಾವು ಯಾರು?" ಎಂದು ಕೇಳಿದ.

"ನಾನು ರಾಕ್ಷಸ. ಈ ಮನೆಯಲ್ಲಿರುವ ಬ್ರಾಹ್ಮಣನನ್ನು ಭಕ್ಷಿಸಲು ಬಂದೆ. ನೀನು ಯಾರು?" ಎಂದು ಕೇಳಿದ ರಾಕ್ಷಸ.

"ನಾನು ಕಳ್ಳ. ಈ ಬ್ರಾಹ್ಮಣನ ದನಗಳನ್ನು ಕದ್ದುಕೊಂಡು ಹೋಗೋಣವೆಂದು ಬಂದೆ" ಎಂದನು.

ಇಬ್ಬರೂ ಬ್ರಾಹ್ಮಣನ ಮನೆಯನ್ನು ಹೊಂಚು ಹಾಕುತ್ತ, ಆವನಿಗೆ ನಿದ್ರೆ ಬರುವುದನ್ನೇ ಕಾಯುತ್ತಿದ್ದರು. ತಕ್ಕ ಸಮಯ ಬಂದಕೂಡಲೇ ರಾಕ್ಷಸನು ಎದ್ದು ಮುಂದೆ ಹೋಗಲು ನೋಡಿದ. ಆಗ ಕಳ್ಳ ಅಡ್ಡ ನಿಂತು ಆವನನ್ನು ತಡೆದು, "ನೀನು ಬ್ರಾಹ್ಮಣನನ್ನು ಹಿಡಿದು ತಿನ್ನುವಾಗ ಬೊಬ್ಬೆಗಿಬ್ಬೆ ಎದ್ದು ಕೋಲಾಹಲವಾಗುತ್ತದೆ. ಅದಕ್ಕೆ ಮೊದಲೇ ನಾನು ದನಗಳನ್ನು ಬಿಚ್ಚಿಕೊಂಡು ಹೋಗಿ ಬಿಡುತ್ತೇನೆ" ಎಂದನು.

"ನಾನು ಮೊದಲು ಬ್ರಾಹ್ಮಣನನ್ನು ತಿಂದು ಬಿಡುತ್ತೇನೆ. ನೀನು ದನಗಳನ್ನು ಬಿಚ್ಚುವಾಗ ಅವು ದಡಬಡ ಗಲಾಟೆ ಮಾಡುತ್ತವೆ. ಆಗ ನನ್ನ ಕೆಲಸ ಕೆಡುತ್ತದೆ" ಎಂದ ರಾಕ್ಷಸ.

ಇಬ್ಬರೂ ಈ ವಿಧವಾಗಿ ವಾದಿಸಿಕೊಳ್ಳುತ್ತ ದೊಡ್ಡ ಧ್ವನಿಯಿಂದ, ನಾನು ಮುಂದೆ ನಾನು ಮುಂದೆ ಎಂದು ಜಗಳಾಡುವಾಗ ಬ್ರಾಹ್ಮಣನಿಗೆ ಎಚ್ಚರಾಗಿ "ಯಾರದು?" ಎಂದ.

"ಬ್ರಾಹ್ಮಣಾ, ಈ ರಾಕ್ಷಸ ನಿನ್ನನ್ನು ತಿನ್ನುತ್ತಾನಂತೆ!" ಎಂದ ಕಳ್ಳ.

"ಬ್ರಾಹ್ಮಣಾ, ಈ ಕಳ್ಳ ನಿನ್ನ ದನಗಳನ್ನು ಕದ್ದುಕೊಂಡು ಹೋಗುತ್ತಾನಂತೆ" ಎಂದ ರಾಕ್ಷಸ.

ಕೂಡಲೇ ಬ್ರಾಹ್ಮಣನು ನರಸಿಂಹ ಸ್ತೋತ್ರವನ್ನು ಪಠಿಸತೊಡಗಿದನು. ಅದನ್ನು ಕೇಳಿ ರಾಕ್ಷಸನು ಹೆದರಿ ಪಲಾಯನ ಮಾಡಿದ.

ಬ್ರಾಹ್ಮಣನು ಕೂಗಿಕೊಂಡು ಮಂತ್ರ ಹೇಳುವಾಗ ಅಕ್ಕಪಕ್ಕದವರು ಓಡಿ ಬರುವಂತೆ ತೋರಿದುದರಿಂದ ಕಳ್ಳನೂ ಪರಾರಿಯಾದನು.



## ೧೯೩. ಪ್ರಾಚೀನ ಷಾಂಗ್ ಶಿಲ್ಪ ಕಲೆ

ಕಳೆದ ಹತ್ತು ವರ್ಷಗಳಿಂದ ನಡೆಸಿದ ಅಗೆತದಿಂದಾಗಿ, ಚೀನಾದಲ್ಲಿ ಕ್ರಿ. ಪೂ. ೧೬–೧೪ ಶತಮಾನಗಳ ಮಧ್ಯ ಕಾಲದಲ್ಲಿ ಷಾಂಗ್ ಗುಲಾಮ ಸಮಾಜದ ಸಂಸ್ಕೃತಿ ಎಷ್ಟೊಂದು ವಿಸ್ತರಿಸಿತ್ತೆಂಬುದು ಹೊರಬಿದ್ದಿದೆ. ಮುಖ್ಯವಾಗಿ ಕಂಚಿನ ಪಾತ್ರೆಗಳಲ್ಲಿಯ ಕಲಾಕೃತಿ ಅತ್ಯುನ್ನತ ಸ್ಥಾಯಿಗೆ ಸೇರಿದುದು. ಇವುಗಳಲ್ಲಿ ಪಾನ ಪಾತ್ರೆಗಳೂ, ಅಡಿಗೆ ಪಾತ್ರೆಗಳೂ, ಪೂಜಾ ಪಾತ್ರೆಗಳೂ ಇವೆ. ಅನೇಕವಾಗಿ ಅವುಗಳ ಮೇಲೆ ಅವುಗಳ ಒಡೆಯನಾದ ಗುಲಾಮ ಒಡೆಯನ ಹೆಸರುಕೆತ್ತಿದೆ. ಚಿತ್ರದಲ್ಲಿರುವುದು "ಟಿಂಗ್" ಎಂಬ ತರಗತಿಯ ಅಡಿಗೇ ಪಾತ್ರೆ. ಅದರ ಎತ್ತರ ೧೦೦ ಸೆಂಟಿಮೀಟರ್. ಭಾರ ೮೭.೪ ಕಿಲೋ.





# ಕಡುಗಲಿಯ ಸೋಲು

ಸಮುದ್ರದ ತೆರೆಯಂತೆ ಮತ್ತೆ ಮತ್ತೆ ಹಿಂದಿರುಗಿ ಹೋಗುವ ಬೇತಾಳವನ್ನು ಬೆಂಬಿಡದೆ ಹೋಗಿ ತ್ರಿವಿಕ್ರಮನು, ಮರದ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೇರಿಸಿ ಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗೆ ಆವಿಷ್ಟವಾದ ಬೇತಾಳವು ಮಾತಾಡಲು ತೊಡಗಿ, "ರಾಜನೇ, ನೀನು ಯಾರಿಗಾದರೂ ಏನಾದರೂ ವಾಗ್ದಾನ ಮಾಡಿ ಸಿಕ್ಕಿ ಹಾಕಿಕೊಂಡದ್ದಕ್ಕೇ ಹೀಗೆ ಶ್ರಮಪಡುವಿ ಯೆಂದು ಕಾಣುತ್ತದೆ. ಕೆಲವು ಸಂದರ್ಭಗಳಲ್ಲಿ ಹೇಳಿದ ಮಾತನ್ನು ಉಳಿಸಿಕೊಳ್ಳಲಾಗದೆ ಹೋಗು ವುದೂ ಉಂಟು. ಇದಕ್ಕೆ ನಿದರ್ಶನವಾಗಿ ಮಣಿ ಮೇಖಲೆಯ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೇಳಿ ಹೀಗೆ ಕಥೆಯನ್ನು ಪ್ರಾರಂಭ ಮಾಡಿತು:

ನೂರಾರು ವರ್ಷಗಳ ಹಿಂದೆ ಮಾಳವದೇಶಕ್ಕೂ ಪಾಂಚಾಲದೇಶಕ್ಕೂ ಬದ್ಧ ವೈರವಿದ್ದಿತು. ಅದು ಹಿರಿಯರ ಕಾಲದಿಂದ ಬಂದಿದ್ದ ವೈರ. ಹಾಗಿರುವಾಗ ಮಾಳವದೇಶದ ರಾಜ ವೀರಸೇನನಿಗೆ ಜಯಸಿಂಹ

ಬೇತಾಳ ಕಥೆಗಳು



ನೆಂಬ ಕುಮಾರನಿದ್ದು, ಯುವರಾಜನಾಗಿದ್ದನು. ಅತ್ತ ಪಾಂಚಾಲರಾಜನಾದ ವಿಮಲಾದಿತ್ಯನಿಗೆ ಮಣಿಮೇಖಲೆ ಎಂಬ ಸುರಸುಂದರಿಯಾದ ಕುಮಾರಿ ಮದುವೆಯ ವಯಸ್ಸಿಗೆ ಬಂದಿದ್ದಳು. ಅಂತೆಯೇ ವಿಮಲಾದಿತ್ಯನು ಮಣಿಮೇಖಲೆಗೆ ಸ್ವಯಂವರ ಮಾಡುವುದೆಂದು ನಿಶ್ಚಯಿಸಿದನು. ಅನೇಕ ದೇಶಗಳ ರಾಜರಿಗೆ ಅವನಿಂದ ಆಹ್ವಾನಗಳು ಹೋದುವು. ತ್ರಿಲೋಕಸುಂದರಿ ಎನಿಸಿದ ಮಣಿಮೇಖಲೆಯನ್ನು ಮದುವೆಯಾಗುವ ಆಶೆಯಿಂದ ಪ್ರಾಯಮಿಾರಿದ ರಾಜರು ಕೂಡ ಸ್ವಯಂವರಕ್ಕೆ ಹೊರಟರು.

ಆದರೆ ವಿಮಲಾದಿತ್ಯನು ಶತ್ರುವಾದ ಮಾಳವ ರಾಜ ವೀರಸೇನನಿಗೆ ಮಾತ್ರ ಆಹ್ವಾನ ಕಳುಹಿಸಲಿಲ್ಲ. ಅದನ್ನು ನೋಡಿ ವೀರಸೇನನಿಗೆ ಬಹಳ ಕೋಪ ಬಂದಿತು. ಅದಕ್ಕೆ ಶತ್ರುತ್ವ ಮಾತ್ರ ಕಾರಣವಲ್ಲ; ಅವನು ಮಣಿಮೇಖಲೆಯನ್ನು ಮದುವೆಯಾಗಬೇಕೆಂದು ಕಾಲ ನಿರೀಕ್ಷೆ ಮಾಡಿಕೊಂಡಿದ್ದನು.

ಆದುದರಿಂದ ವೀರಸಿಂಹನು ತನ್ನ ಮಗನಾದ ವಿಜಯಸಿಂಹನನ್ನು ಕರೆದು, "ನೀನು ಈಗಲೇ ಬೇಕಾದಷ್ಟು ಸೈನ್ಯದೊಂದಿಗೆ ಹೋಗಿ, ಪಾಂಚಾಲ ದೇಶವನ್ನು ಮುತ್ತಿ, ರಾಜನನ್ನು ಸೋಲಿಸಿ, ಅವನ ಕುಮಾರಿಯಾದ ಮಣಿಮೇಖಲೆಯನ್ನು ಬಂದೀ ಮಾಡಿ ಕರೆದುಕೊಂಡು ಬಾ. ನಾನು ಅವಳನ್ನು ವಿವಾಹವಾಗಲು ನಿಶ್ಚಯಿಸಿದ್ದೇನೆ. ಇಷ್ಟು ಮಾಡಲು ನೀನು ಶಕ್ತನಾಗಿರುವಿಯೆಂದು ನಂಬಿದ್ದೇನೆ." ಎಂದನು.

ಕಡುಗಲಿಯಾದ ವಿಜಯಸಿಂಹನು ಪಾಂಚಾಲ ದೇಶದ ಮೇಲೆ ದಂಡೆತ್ತಿ ಹೋಗಿ, ಯುದ್ಧ ಮಾಡಿ ಪಾಂಚಾಲರಾಜನನ್ನು ಜಯಿಸಿಬಿಟ್ಟನು. ವಿಮಲಾದಿತ್ಯನು ತಪ್ಪಿಸಿಕೊಂಡು ಓಡಿಹೋಗಿ ಜೀವ ಉಳಿಸಿಕೊಂಡನು. ಉಳಿದ ರಾಜಕುಟುಂಬದವರೆಲ್ಲಾ ವಿಜಯಸಿಂಹನಿಂದ ಬಂದಿಗಳಾದರು. ವಿಜಯಸಿಂಹನು ಮಣಿಮೇಖಲೆಯನ್ನು ತುಂಬಾ ಗೌರವ ಮರ್ಯಾದೆಗಳಿಂದ ತನ್ನಬಳಿಗೆ ಕರೆಯಿಸಿ, ಅವಳ ಸೌಂದರ್ಯವನ್ನು ನೋಡಿ, ತನ್ನ ಕಣ್ಣುಗಳನ್ನೇ ನಂಬಲಾರದೆ ಹೋದನು. ಇಷ್ಟೊಂದು ಸೌಂದರ್ಯದಿಂದಿರುವ ಇವಳು ನಿಜವಾಗಿಯೂ ಮಾನವಿಯೋ ಅಲ್ಲ ದೇವಿಯೋ ?

ಆದರೆ ಅವನು ಬೇಗನೇ ಎಚ್ಚರಕ್ಕೆ ಬಂದು, "ರಾಜಕುಮಾರೀ, ನಿಮ್ಮನ್ನು ಮದುವೆಯಾಗಬೇಕೆಂದು ನನ್ನ ತಂದೆಯವರು ತುಂಬಾ ಇಚ್ಛೆಯುಳ್ಳರಾಗಿದ್ದಾರೆ. ಆದುದರಿಂದ ನೀವು ನಾಳೆ ನಮ್ಮೊಂದಿಗೆ ಮಾಳವ ದೇಶಕ್ಕೆ ಹೊರಡಲು ಸಿದ್ಧರಾಗಿರಬೇಕು." ಎಂದನು. ಮಣಿಮೇಖಲೆ ಅವನು ಹೇಳಿದ ಮಾತುಗಳಿಗೆ ಏನೂ ಉತ್ತರಕೊಡದೆ ಮೌನವಾಗಿದ್ದು, ತನ್ನ ಮಂದಿರಕ್ಕೆ ಹಿಂದಿರುಗಿದಳು.

ಆ ದಿನ ರಾತ್ರಿ ವಿಜಯಸಿಂಹನಿಗೆ ಮತ್ತೆ ಮಣಿಮೇಖಲೆಯೇ ನೆನಪಿಗೆ ಬಂದಳು. ಅವಳ ಅಪೂರ್ವ ಸೌಂದರ್ಯವನ್ನೇ ನೆನೆಯುತ್ತಾ, ನಿದ್ದೆ ಹಿಡಿಯದೆ,

ತನ್ನ ಶಯನ ಮಂದಿರದಲ್ಲಿ ಸುಮ್ಮನೆ ಎಡತಾಕಿಕೊಂಡಿದ್ದನು. ಆಗ ಪರಿಚಾರಕನೊಬ್ಬ ಮಣಿಮೇಖಲೆಯ ಕಡೆಯಿಂದ ಒಂದು ಪತ್ರವನ್ನು ತಂದು ಅವನಿಗೆ ಕೊಟ್ಟುಹೋದನು. ಅದರಲ್ಲಿ ಈ ರೀತಿಯಾಗಿ ಬರೆಯಲಾಗಿತ್ತು.

"ವೀರೋಚಿತವಾಗಿ ಸಾಧಿಸಿಕೊಂಡುದನ್ನು ಬೇರೆಯವರಿಗೆ ಧಾರೆಯೆರೆಯುವುದು ಒಳ್ಳೆಯ ಕೆಲಸವೆನಿಸಲಾರದು."

ಈ ಒಕ್ಕಣೆಯಿಂದ ಮಣಿಮೇಖಲೆ ತನ್ನನ್ನೇ ಮದುವೆಯಾಗಲು ಬಯಸುವಳೆಂದು ವಿಜಯಸಿಂಹನಿಗೆ ಅರ್ಥವಾಯಿತು. ಮೊದಲೇ ಮಣಿಮೇಖಲೆಯ ಮೋಹದಲ್ಲಿ ಉರಿಯುತ್ತಿದ್ದವನ ಮೇಲೆ, ಈ ಸುದ್ದಿ ಇನ್ನಿಷ್ಟು ತುಪ್ಪಸುರಿದಂತಾಯಿತು. ಅವಳನ್ನು ತಾನೇ ವಿವಾಹಮಾಡಿಕೊಳ್ಳಬೇಕೆಂದು ನಿಶ್ಚಯಕ್ಕೆ ಬಂದನು.

ಕೂಡಲೇ ಮಾಳವ ದೇಶಕ್ಕೆ ಹಿಂದಿರುಗುವ ದಿನವನ್ನು ಮುಂದುವರಿಸಿಟ್ಟನು. ಅದರೊಂದಿಗೆ ಅದೇ ದಿನ ಒಳ್ಳೆಯ ಮುಹೂರ್ತವಿದ್ದುದರಿಂದ ಮಣಿಮೇಖಲೆಯನ್ನು ವಿವಾಹ ಮಾಡಿಕೊಂಡೂಬಿಟ್ಟನು.

ಆ ದಿನ ರಾತ್ರಿ ಅವನು ತನ್ನ ವಧುವನ್ನು ಏಕಾಂತದಲ್ಲಿ ಕಲೆತುಕೊಳ್ಳಲು ಶಯ್ಯಾಗೃಹವನ್ನು ಹೊಕ್ಕನು. ಅಲ್ಲಿಗೆ ರತೀದೇವಿಯಂತೆ ಶೃಂಗಾರವಾಗಿ ಬಂದ ಮಣಿಮೇಖಲೆ, ಅವನನ್ನು ಸಮೀಪಿಸಿದಳು. ಆಗ ಆಕಸ್ಮಿಕವಾಗಿ ಅವಳು ತನ್ನ ಸೀರೆಯ ಮರೆಯಿಂದ ಒಂದು ಸುರಿಗತ್ತಿಯನ್ನು ತೆಗೆದು ಅವನ ಎದೆಯನ್ನು ತಿವಿಯಲು ಪ್ರಯತ್ನಿಸಿದಳು.

ಫಕ್ಕನೆ ವಿಜಯಸಿಂಹನು ಅವಳ ಕೈಯನ್ನು ಗಟ್ಟಿಯಾಗಿ ಹಿಡಿದು, ಸುರಿಗತ್ತಿ ಅವಳ ಕೈಯಿಂದ ಕೆಳಗೆ ಬೀಳುವವರೆಗೂ ಪೀಡಿಸಿ, ಆಮೇಲೆ ಕೈಬಿಟ್ಟು, "ಇದೇಕೆ ಹೀಗೆ ಮಾಡಿದೆ? ನನ್ನನ್ನು ಪ್ರೇಮಿಸುವಂತೆ ನಟಿಸಿ, ಮದುವೆ ಕೂಡಾ ಮಾಡಿಕೊಂಡು, ನನ್ನನ್ನು ಕೊಲ್ಲಲು ಏಕೆ ಪ್ರಯತ್ನಿಸಿದೆ? ನಿಜವನ್ನು ಹೇಳಿಬಿಡು. ನಾನು ನಿನಗೆ ಯಾವ ಶಿಕ್ಷೆಯನ್ನೂ ಕೊಡಲಾರೆ. ಮರೆಮಾಜದೆ ಹೇಳಿಬಿಡು" ಎಂದನು.



"ತಂದೆಯ ಆಜ್ಞೆಯನ್ನು ನೆರವೇರಿಸಲು ಪ್ರಯತ್ನಿಸಿದೆ. ಯುದ್ಧಕ್ಕೆ ಮೊದಲು ನನ್ನ ತಂದೆ, ಇಲ್ಲಿಯ ಪರಿಸ್ಥಿತಿ ತಾರುಮಾರಾಗಿ, ತನಗೆ ಅಪಜಯವಾದ ಪಕ್ಷದಲ್ಲಿ ಹಗೆ ತೀರಿಸಿಕೊಳ್ಳದೆ ಬಿಡಬೇಡವೆಂದು ನನಗೆ ಆಜ್ಞಾಪಿಸಿದ್ದಾರೆ. ಅವರ ಆಜ್ಞೆಯನ್ನು ನೆರವೇರಿಸಬೇಕಾದು ಪ್ರೇಮಕ್ಕಿಂತ ಹೆಚ್ಚಿನ ಕರ್ತವ್ಯವೆಂದು ಭಾವಿಸಿದ್ದೇನೆ. ನಾನು ನಿಮ್ಮನ್ನು ಪ್ರೇಮಿಸಿದ್ದೇನೆಂದು ಹೇಳಿದ ಮಾತಿನಲ್ಲಿ ಅಸತ್ಯವೇನೂ ಇಲ್ಲ. ನಿಮ್ಮ ಹೊರತು ಇನ್ನೊಬ್ಬನನ್ನು ಮದುವೆಯಾಗುವ ಉದ್ದೇಶವೂ ನನಗಿಲ್ಲ. ಇದು ಸತ್ಯ. ನೀವು ಕೊಡುವ ಶಿಕ್ಷೆಯನ್ನು ಸಂತೋಷದಿಂದ ಸ್ವೀಕರಿಸುತ್ತೇನೆ" ಎಂದಳು ಮಣಿಮೇಖಲೆ.

ವಿಜಯಸಿಂಹನು ಸ್ವಲ್ಪ ಹೊತ್ತು ಏನೋ ಆಲೋಚನೆ ಮಾಡಿ, ಒಂದು ನಿರ್ಣಯಕ್ಕೆ ಬಂದು, ಅಲ್ಲಿಂದ ಎದ್ದು ಎಲ್ಲಿಗೋ ಹೊರಟುಹೊದನು. ಎಲ್ಲಿಗೆ ಹೋದನೋ ಯಾರಿಗೂ ಗೊತ್ತಾಗಲಿಲ್ಲ.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ವಿಜಯಸಿಂಹನು ತಾನು ಪ್ರೇಮಿಸಿದ ಮಣಿಮೇಖಲೆಯನ್ನು ಹಾಗೆ ಬಿಟ್ಟು ಏಕೆ ಹೊರಟುಹೋದ? ಅವಳು ತನ್ನನ್ನು ಕೊಲ್ಲಲಿಕ್ಕೆ ನೋಡಿದುದನ್ನು ಕ್ಷಮಿಸಲಾಗದೆ ಹೋದನೆ? ಎಂದಾದರೂ ಕೊಲ್ಲದೆ ಬಿಡಳೆಂದು ಅಂಜಿದನೆ? ಅವಳು ನಿಜ ಸಂಗತಿ ಹೇಳಿದರೂ ನಂಬಲಾರದೆ ಹೋದನೆ? ಅವಳನ್ನು ಅನಾಥಳನ್ನಾಗಿ ಮಾಡಿದವನು ತನ್ನ ದೇಶಕ್ಕೂ ಹೋಗದೆ ದೇಶಾಂತರಗತನಾಗಲು ಕಾರಣವೇನು? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆಹೋದರೆ ನಿನ್ನ ತಲೆಯೊಡೆದು ಹೋಗುತ್ತದೆ" ಎಂದು ಹೇಳಿ ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು: "ವಿಜಯಸಿಂಹನು ಮಣಿಮೇಖಲೆಯನ್ನು ಬಿಟ್ಟುಹೋದುದರಲ್ಲಿ ಅವನ ದೋಷವೇನಿಲ್ಲ. ಅವಳ ಪ್ರಯತ್ನವು ಕೈಗೂಡಿ, ಅವನು ಸತ್ತು ಹೋಗಿದ್ದರೆ ಅವಳು ಹೇಗೂ ಅನಾಥೆಯಾಗುವವಳೇ. ಅವನು ಹೊರಟು ಹೋಗಲು ನಿಜವಾದ ಕಾರಣವೇನೆಂದರೆ, ಅವನು ಮಣಿಮೇಖಲೆಯಿಂದ ಕಲಿತ ಗುಣಪಾಠವೇ. ಅವಳು ಅವನನ್ನು ಪ್ರೇಮಿಸಿದ್ದರೂ ಸಹ ಅದಕ್ಕಿಂತ ತಂದೆಯ ಆಜ್ಞೆಯೇ ಹೆಚ್ಚಿನದೆಂದಿದ್ದಾಳೆ. ಅವನಾದರೋ ಅವಳ ಮೇಲಿನ ಪ್ರೇಮದಲ್ಲಿ ತಂದೆಯ ಆಜ್ಞೆಯನ್ನು ಬದಿಗೆ ಸರಿಸಿಬಿಟ್ಟನು. ಆದಕ್ಕೇ ಅವನು ಸ್ವದೇಶಕ್ಕೆ ತಿರುಗಿಹೋಗದೆ ತನ್ನನ್ನು ನಾಮರೂಪವಿಲ್ಲದವನಂತೆ ಮಾಡಿಕೊಂಡನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ನೆರೆಯ ನಿಗ್ರಹ

ಹಿಂದೆ ಒಂದು ಕಾಲದಲ್ಲಿ ಬ್ರಹ್ಮಪುರವೆಂಬ ರಾಜ್ಯವನ್ನು ಶಂಕಾ ಮಹಾರಾಜನೆಂಬವನು ಪಾಲಿಸಿಕೊಂಡಿದ್ದನು. ಅವನು ಬ್ರಾಹ್ಮಣನಾದುದರಿಂದ, ಅವನ ಆಸ್ಥಾನದ ಉದ್ಯೋಗಸ್ಥರಲ್ಲಿ ಹೆಚ್ಚಿನವರು ಬ್ರಾಹ್ಮಣರಾಗಿದ್ದರು. ಮುಖ್ಯಮಂತ್ರಿ ಮಾತ್ರ ಕ್ಷತ್ರಿಯನಾಗಿದ್ದ.

ಶಂಕಾ ಮಹಾರಾಜನು ಬ್ರಾಹ್ಮಣನಾದರೂ ಧೈರ್ಯ ಸಾಹಸಗಳಲ್ಲಿ ಕ್ಷತ್ರಿಯರಂತೆಯೇ ಇದ್ದನಲ್ಲದೆ, ಒಳ್ಳೆಯ ವಿವೇಕಿಯಾಗಿಯೂ ಇದ್ದನು. ಆದುದರಿಂದ ಅವನಿಗೆ ಶತ್ರುಗಳ ಕಾಟವೇನಿರದೆ ಸುಗಮವಾಗಿ ಪರಿಪಾಲನೆ ಸಾಗಿಕೊಂಡಿತ್ತು. ಅಷ್ಟು ಮಾತ್ರವಲ್ಲದೆ ಶತ್ರುಗಳು ಅವನ ತಂಟೆಗೆ ಬರಲು ಹೆದರುತ್ತಿದ್ದರು.

ಇಂತಹ ಶಂಕಾ ಮಹಾರಾಜನನ್ನು ಪ್ರತಿವರ್ಷವೂ ಗಡಗಡ ನಡುಗಿಸುವುದೆಂದರೆ ರಾಜಧಾನಿಯಲ್ಲಿರುವ ಸುಂದರೀ ನದಿಯಲ್ಲಿ ಬರುವ ನೆರೆ. ಮಳೆಗಾಲದಲ್ಲಿ ಸುಂದರೀ ನದಿ ಉಕ್ಕೇರಿ ಊರುಕೇರಿಗಳಲ್ಲೆಲ್ಲಾ ಹರಿದು ರಾಡಿ ಮಾಡಿ ಭಾರೀ ನಷ್ಟವನ್ನುಂಟು ಮಾಡುತ್ತಿತ್ತು. ನದಿಯನ್ನು ಹತೋಟಿಯಲ್ಲಿಡಲು ಮಾಡಿದ ಪ್ರಯತ್ನವೆಲ್ಲಾ ವ್ಯರ್ಥವಾಗುತ್ತಿದ್ದಿತು.

ರಾಜಧಾನಿಯಲ್ಲಿರುವ ಚಮ್ಮಾರನ ಮಗನೊಬ್ಬ ಚಿಕ್ಕತನದಲ್ಲೇ ಊರು ಬಿಟ್ಟು ಎತ್ತೋ ಹೋಗಿದ್ದ. ಲೋಚನನೆಂಬುದು ಅವನ ಹೆಸರು. ಅವನು ಮಂತ್ರ ವಿದ್ಯೆ ಕಲಿಯಲು ಕಾಮರೂಪ ದೇಶಕ್ಕೆ ಹೋದನೆಂದು ಕೆಲವರು ಹೇಳಿದರು. ಕೆಲವರು ಯಂತ್ರ ವಿದ್ಯೆ ಕಲಿಯಲು ಕರ್ಮಪುರಕ್ಕೆ ಹೋಗಿದ್ದಾನೆಂದು ಹೇಳಿದರು. ಯಾರಿಗೂ ಖಂಡಿತ ಗೊತ್ತಿರಲಿಲ್ಲ. ಹಾಗೆ ಹೊರಟುಹೋದ ಲೋಚನನು ಹದಿನೈದು ವರ್ಷಗಳ ಮೇಲೆ ಸ್ವಂತ ಊರಿಗೆ ಹಿರುಗಿ ಬಂದನು. ಅವನೀಗ ಬಲಾಢ್ಯನಾಗಿದ್ದ. ಮುಖದಲ್ಲಿ ತೇಜಸ್ಸೂ ಕಣ್ಣುಗಳಲ್ಲಿ ಕಾಂತಿಯೂ ಕೂಡಿದ್ದುವು.

ಹಿಂದಿರುಗಿ ಬಂದ ಲೋಚನನ್ನು ನೋಡಿ ಅವನ ಬಂಧುಬಳಗದವರು ತುಂಬಾ ಸಂತೋಷಿಸಿ ಎಲ್ಲಿಗೆ ಹೋದೆ, ಏನು ಮಾಡಿದೆ ಎಂದು ಮುಂತಾಗಿ ವಿಚಾರಿಸಿದರು.

ಅದಕ್ಕೆ ಅವನು "ನನ್ನ ತಾಯಿ ಸುಂದರೀ ನದಿಯ ನೆರೆಯಲ್ಲಿ ಮುಳುಗಿ ಹೋದುದನ್ನು ನೋಡಿದ ಮೇಲೆ, ಈ ನದಿಯ ನೆರೆಯನ್ನು ಹೇಗೆ ಅಡಗಿಸುವುದೆಂಬ ಆಲೋಚನೆ ನನಗೆ ಬೆನ್ನುಬಿತ್ತು. ನೀರನ್ನು

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು



ನನ್ನಿಷ್ಟದಂತೆ ಆಡಿಸುವ ವಿದ್ಯೆ ಕಲಿಯಬೇಕೆಂದು ಅನೇಕ ದೇಶಗಳನ್ನು ತಿರುಗಿ ಕಡೆಗೆ ನೆರೆಯನ್ನು ನಿಗ್ರಹಿಸುವ ವಿದ್ಯೆ ಕಲಿತುಕೊಂಡು ಬಂದೆ. ಈಗ ನಾನು ಹೇಗೆ ಹೇಳಿದರೆ ಹಾಗೆಯೇ ಕೇಳುತ್ತದೆ ನೀರು. ಮಹಾರಾಜರನ್ನು ನೋಡಿ ಅವರ ಒಪ್ಪಿಗೆಯನ್ನೂ ಸಹಾಯವನ್ನೂ ಪಡೆದು ನೆರೆಯ ನಿಗ್ರಹ ಕಾರ್ಯ ಪ್ರಾರಂಭಿಸಬೇಕೆಂದಿದ್ದೇನೆ" ಎಂದನು.

ಹಾಗೆಯೇ ಅವನು ರಾಜನ ದರ್ಶನಕ್ಕೆ ಹೋದಾಗ, ರಾಜನು ಅವನಿಗೆ ದರ್ಶನ ಕೊಡಲು ಒಪ್ಪಲಿಲ್ಲ. ಅವನು ಎಷ್ಟೇ ವಿವೇಕಿಯಾದರೂ ಅಸ್ಪೃಶ್ಯತೆಯನ್ನು ಪರಿಪಾಲಿಸಿಕೊಂಡಿದ್ದವನು. ಅದರ ಮೇಲೆ ಎಂಥದೋ ನಂಬುಗೆ ಇಟ್ಟವನು. ಕೇವಲ ಒಬ್ಬ ಚಮ್ಮಾರನ ಮಗನಿಗೆ ನೆರೆನೀರನ್ನು ನಿಗ್ರಹಿಸುವ ಶಕ್ತಿ ಇದೆ ಎಂಬುದನ್ನು ನಂಬಲು ಅವನಿಂದ ಸಾಧ್ಯವಾಗಲಿಲ್ಲ. ಇತರ ಉದ್ಯೋಗಸ್ಥರೂ ಹಾಗೆಯೇ ಅಭಿಪ್ರಾಯಪಟ್ಟರು. ಮಂತ್ರಿ ಧರ್ಮಪಾಲನು ಮಾತ್ರ ವಿಶಾಲ ದೃಷ್ಟಿಯುವನೂ ಉದಾರನೂ ಆದುದರಿಂದ ಅವನಿಗೆ ಲೋಚನನ ಮಾತಿನಲ್ಲಿ ನಂಬುಗೆಯುಂಟಾಗಿತ್ತು. ಅವನು ಲೋಚನನನ್ನು ರಹಸ್ಯವಾಗಿ ಸಂಧಿಸಿ, ಅನೇಕ ಪ್ರಶ್ನೆಗಳನ್ನು ಮಾಡಿ, ನೆರೆಯ ಹಾವಳಿಯನ್ನು ಪರಿಷ್ಕರಿಸಲು ತಕ್ಕ ದಾರಿ ಅವನಿಂದ ಮಾಡಿಸಲು ಸಾಧ್ಯವೆಂಬುದನ್ನು ತಿಳಿದುಕೊಂಡನು. ಆದರೆ ರಾಜನನ್ನೂ ಅವನ ಅಭಿಪ್ರಾಯದಂತೆಯೇ ಇರುವ ಹೆಚ್ಚಿನ ಉದ್ಯೋಗಸ್ಥರನ್ನೂ ನಂಬಿಸುವುದು ಸುಲಭದ ಮಾತಾಗಿರಲಿಲ್ಲ.

"ನೀರು ನೀನು ಹೇಳಿದಂತೆ ಮಾಡುತ್ತದೆಂಬುದನ್ನು ನಿರೂಪಿಸಲು ಏನಾದರೂ ಒಂದು ಪ್ರಯೋಗ ಮಾಡಿ ತೋರಿಸಬಲ್ಲೆಯಾ?" ಎಂದು ಮಂತ್ರಿ ಲೋಚನನನ್ನು ಕೇಳಿದನು.

"ಮಾಡಬಹುದು. ಅದನ್ನು ನೋಡಲಿಕ್ಕಾದರೂ ಮಹಾರಾಜರು ಒಪ್ಪಬೇಕಷ್ಟೆ?" ಎಂದ ಲೋಚನ.

ಮಂತ್ರಿ ಲೋಚನನನ್ನು ದರ್ಬಾರಿಗೆ ಕರೆದುಕೊಂಡು ಹೋಗಿ, ರಾಜನೊಂದಿಗೆ ಹೇಳಿ, ತಾನು ಹೇಳಿದಂತೆ ನೀರು ಕೇಳುತ್ತದೆಂಬುದನ್ನು ಪ್ರಯೋಗ ಮಾಡಿ ತೋರಿಸುವುದಕ್ಕೆ ಅವನಿಗೆ ಅನುಜ್ಞೆ ನೀಡುವುದರಿಂದ ನಷ್ಟವೇನಿಲ್ಲವೆಂತಲೂ ಹೇಳಿದನು.

"ಏನಂದಿರಿ? ಗಂಗಾ ಮಾತೆ ತನ್ನಿಷ್ಟ ಪ್ರಕಾರ ನಡೆಯುವಳೆಂದು ಲೋಚನನು ಹೇಳುತ್ತಾನೇನು?" ಎಂದು ಕೇಳಿದ ರಾಜ.

"ಹೌದಂತೆ. ಜಲಪ್ರವಾಹವನ್ನು ನಿಲ್ಲಿಸುವ ಶಕ್ತಿ ಅವನಿಗಿದೆಯಂತೆ. ಈ ಸಭೆಯಲ್ಲಿಯೇ ಅದನ್ನು ನಿರೂಪಿಸುತ್ತಾನಂತೆ" ಎಂದ ಮಂತ್ರಿ.

ರಾಜನು ಅನುಮತಿ ಕೊಟ್ಟನು. ಮರುದಿನ ಗೊತ್ತುಮಾಡಲ್ಪಟ್ಟ ಹೊತ್ತಿನಲ್ಲಿ ಲೋಚನನು ಸಭೆಗೆ ಬಂದನು. ಅವನ ಕೈಯಲ್ಲಿ ಆರು ಅಂಗುಲ ಎತ್ತರವೂ, ಮೂರು ಅಂಗುಲ ವ್ಯಾಸವೂ ಉಳ್ಳ ಒಂದು ಡಬ್ಬವಿದ್ದಿತು. ಅದಕ್ಕೆ ಗಟ್ಟಿಯಾಗಿ ಹಿಡಿಯು

ವಂತಹ ಮುಚ್ಚಳವಿದ್ದಿತು. ಆ ಮುಚ್ಚಳದಲ್ಲಿ ಕೆಲವು ಸಣ್ಣಸಣ್ಣ ರಂಧ್ರಗಳಿದ್ದುವು.

"ಈ ಡಬ್ಬದಲ್ಲಿ ನೀರು ಹಾಕಿ, ಮುಚ್ಚಳವನ್ನು ಗಟ್ಟಿಯಾಗಿ ಬಿಗಿದು ತಲೆ ಕೆಳಗೆ ಮಾಡಿ ಹಿಡಿದರೆ, ಮುಚ್ಚಳದಲ್ಲಿರುವ ರಂಧ್ರಗಳ ಮೂಲಕ ನೀರಿನ ಧಾರೆಗಳು ಇಳಿಯುತ್ತವೆ, ನೋಡಿರಿ" ಎನ್ನುತ್ತಾ ಲೋಚನನು ಡಬ್ಬದೊಳಗೆ ನೀರು ಹಾಕಿ ಮುಚ್ಚಳ ಬಿಗಿದು ತಲೆ ಕೆಳಗೆ ಮಾಡಿ ಹಿಡಿದನು. ಮುಚ್ಚಳದ ರಂಧ್ರಗಳ ಮೂಲಕ ನೀರಿನ ಧಾರೆಗಳು ಬಂದುವು.

"ಗಂಗಾ ಮಾತಾ ! ದಯ ಮಾಡಿ ಒಳಗೇ ನಿಲ್ಲು, ಕೆಳಗಿಳಿಯಬೇಡ" ಎಂದ ಲೋಚನ.

ಕೂಡಲೇ ನೀರಿನ ಧಾರೆಗಳು ನಿಂತುಹೋದುವು. ಮತ್ತೆ ಸ್ವಲ್ಪ ಹೊತ್ತು ತಾಳಿ "ಗಂಗಮ್ಮಾ! ಈಗ ಧಾರೆಗಳನ್ನಿಳಿಸು!" ಎಂದನು. ಕೂಡಲೇ ಪುನಃ ನೀರಿನ ಧಾರೆಗಳು ಇಳಿಯತೊಡಗಿದುವು.

"ಆಹಾ ! ಧನ್ಯನಾದೆ ! ಧನ್ಯನಾದೆ !" ಎನ್ನುತ್ತಾ ರಾಜನು ಪರವಶನಾಗಿ, ಎದ್ದು ಬಂದು ಲೋಚನನನ್ನು ಗಾಢಾಲಿಂಗನ ಮಾಡಿಕೊಂಡನು. ಆಸ್ಥಾನದ ಇತರ ಉದ್ಯೋಗಸ್ಥರೂ ರಾಜನನ್ನು ಅನುಕರಿಸಿ, ಮೆಚ್ಚಿ ಲೋಚನನನ್ನು ಆಲಿಂಗಿಸಿದರು.

ಆಮೇಲೇನು ? ಸುಂದರೀ ನದಿಯ ನೆರೆಯನ್ನು ನಿಗ್ರಹಿಸುವ ಕಾರ್ಯವನ್ನು ಲೋಚನನಿಗೆ ಒಪ್ಪಿಸಿ ಕೊಡಲಾಯಿತು. ಲೋಚನನು ನದಿಯ ಮೇಲು ಭಾಗದಿಂದ, ಮೈದಾನದವರೆಗೂ ಅನೇಕ ಪ್ರಾಂತಗಳಲ್ಲಿ ಅಣೆಕಟ್ಟುಗಳನ್ನು ಕಟ್ಟಿ, ಅನೇಕ ಪ್ರಾಂತಗಳಲ್ಲಿ ಜಲಾಶಯಗಳನ್ನು ಸರಿಗೊಳಿಸಿ ನೀರು ನಿಲ್ಲುವಂತೆ ಮಾಡಿ, ಕಾಲುವೆಗಳನ್ನು ತೆಗೆಯಿಸಿ ನೆರೆಯ ಹಾವಳಿಗೆ ಎಡೆಕೊಡದೆ, ಬೇಸಗೆಯಲ್ಲಿ ನದಿ ಒಣಗಿದಾಗ ಕೂಡಾ ನದಿಯ ನೀರು ಜಲಾಶಯಗಳಲ್ಲಿ ಉಳಿದು ಪ್ರಜೆಗಳಿಗೆ ಉಪಯೋಗವಾಗುವಂತೆ ಮಾಡಿದನು. ಇದರಿಂದ ತುಂಬಾ ಸಂತೋಷಗೊಂಡ ರಾಜನೂ, ಇತರರೂ ಅವನಿಗೆ ಸಹಪಂಕ್ತಿ ಭೋಜನ ನೀಡಿ ಆದರಿಸಿದರು. ಅಸ್ಪೃಶ್ಯತಾ ಭಾವನೆ ಹೊರಟು ಹೋಯಿತು. ದೇವರು ಎಲ್ಲರನ್ನೂ ಒಂದೇ ವಿಧವಾಗಿ ಸೃಷ್ಟಿಸಿದ್ದಾನೆಂದೂ, ಹೆಚ್ಚು ಕಡಮೆಗಳನ್ನು ಮನುಷ್ಯರೇ ಮಾಡಿಕೊಂಡರೆಂದೂ ಸ್ಪಷ್ಟವಾಯಿತು.

ಲೋಚನನು ಡಬ್ಬದಲ್ಲಿಯ ನೀರನ್ನು ಹೇಗೆ ನಿಲ್ಲಿಸಿದನೆಂದರೆ, ಡಬ್ಬದ ಕೆಳಗಿನ ಅಂಚಿನ ಹತ್ತಿರ ಒಂದು ಚಿಕ್ಕ ರಂಧ್ರವಿದ್ದಿತು. ಅದನ್ನು ಲೋಚನನು ತನ್ನ ಬೆರಳಿನಿಂದ ಮುಚ್ಚಿಕೊಂಡಾಗ ಧಾರೆಗಳು ನಿಂತು ಹೋಗುತ್ತವೆ. ಬೆರಳನ್ನು ಬದಿಗೆ ಸರಿಸಿಕೊಂಡರೆ ಮತ್ತೆ ಧಾರೆಗಳು ಬರುತ್ತವೆ. ಬೆರಳಿನ ಆಟ ಯಾರಿಗೂ ಗೊತ್ತಾಗದು. ಅಷ್ಟೇ ಹೊರತು, ಗಂಗಾಮಾತೆಯ ಅನುಗ್ರಹವೇನಿಲ್ಲ.



# ವಿದ್ವಾಂಸನ ಆರಿಕೆ

ಕಳಿಂಗ ರಾಜನಿಗೆ ತನ್ನ ಆಸ್ಥಾನದ ಸಂಗೀತ ವಿದ್ವಾಂಸನ ಹಾಡು ಕೇಳುವುದೆಂದರೆ ಜೀವ. ಕಡೆಗೆ ಆ ವಿದ್ವಾಂಸ ರಾಮವರ್ಮನಿಗೆ ಹುಚ್ಚು ಹಿಡಿಯಿತು. ಆದುದರಿಂದ ಇನ್ನೊಬ್ಬ ವಿದ್ವಾಂಸನನ್ನು ಆಸ್ಥಾನ ವಿದ್ವಾಂಸನನ್ನಾಗಿ ನಿಯಮಿಸಬೇಕಾಯಿತು.

ದೇಶದೊಳಗಿನ ಸಂಗೀತ ವಿದ್ವಾಂಸರಲ್ಲಿ ರತ್ನಪಾಲನು ಗಟ್ಟಿಗನಾಗಿದ್ದ. ಮಂತ್ರಿ ಅವನೊಂದಿಗೆ ಇನ್ನೂ ಕೆಲವು ಮಂದಿ ವಿದ್ವಾಂಸರ ಸಂಗೀತಗಳನ್ನು ರಾಜನ ಮುಂದೆ ಹಾಡಿಸಿದನು. ಯಾರ ಸಂಗೀತವೂ ರಾಜನಿಗೆ ಹಿಡಿಸಲಿಲ್ಲ. "ಯಾವುದೂ ರಾಮವರ್ಮನ ಸಂಗೀತದಂತಿಲ್ಲ!" ಎಂದು ಹೇಳಿ ರಾಜನು ಬೇರೆ ದೇಶಗಳ ವಿದ್ವಾಂಸರನ್ನು ಕರೆಯಿಸಲು ಹೇಳಿದನು.

"ನಮ್ಮ ದೇಶ ಗೊಡ್ಡಾದಂತೆ ಬೇರೆ ದೇಶಗಳಿಂದ ತರಿಸಿ ಆಸ್ಥಾನ ವಿದ್ವಾಂಸ ಪದವಿಗೆ ಆರಿಸುವುದೆಂದರೇನು?" ಎಂದು ಸಭಾಸದರಿಗೆಲ್ಲ ಸಂಕಟವೆನಿಸಿತು.

ಆದರೂ ಮಂತ್ರಿ ಬೇರೆ ದೇಶಗಳಿಂದಲೂ ಸಂಗೀತ ವಿದ್ವಾಂಸರನ್ನು ಕರೆಸಿದನು. ಅವರಿಗೆಲ್ಲ ಮೊದಲೇ ಹಣ ಕೊಟ್ಟು "ನೀವು ತುಂಬ ತನ್ಮಯರಾಗಿ ಹಾಡಿಬಿಟ್ಟರೆ ರಾಜನು ಏನು ಮಾಡುವನೋ ಹೇಳಲಾರೆ, ಕಂಠವನ್ನು ಹದ್ದಿನಲ್ಲಿಟ್ಟುಕೊಂಡೇ ಹಾಡಿರಿ, ಜಾಗ್ರತೆ!" ಎಂದನು.

ಅವರ ಸಂಗೀತವನ್ನು ಕೇಳಿದ ಮೇಲೆ ರಾಜನು ರತ್ನಪಾಲನ ಸಂಗೀತವೇ ಚೆನ್ನಾಗಿದೆ ಎಂದು ಹೇಳಿ, ಅವನನ್ನೇ ಆಸ್ಥಾನ ವಿದ್ವಾಂಸನನ್ನಾಗಿ ನಿಯಮಿಸಿದನು.





# ಅಧರ್ಮಛತ್ರ

ಪರೋಪಕಾರೀ ಚಿನ್ನಪ್ಪನು ತನ್ನ ನಾಯಿಯೊಂದಿಗೆ ವಿಮಲಾಪುರವೆಂಬ ಗ್ರಾಮವನ್ನು ತಲಪಿದನು. ಅದೊಂದು ಜಮೀನ್ದಾರೀ ಗ್ರಾಮವಾಗಿತ್ತು. ಆ ಜಮೀನ್ದಾರನು ಸಾಮಾನ್ಯ ಜಮೀನ್ದಾರರಂತಲ್ಲ; ಪ್ರಜೆಗಳ ರಕ್ತವನ್ನು ಹೀರುವ ಕಾರ್ಕೋಟಕನಂತಹ ವನು. ಗ್ರಾಮದ ಜನರಿಗೆ ಅವನ ಮೇಲೆ ಒಳಗೊಳಗೆ ದ್ವೇಷವಿದ್ದಿತು. ಆದರೆ ಹೊಟ್ಟೆಯ ಸಿಟ್ಟು ರಟ್ಟೆ ಯಲ್ಲಿಲ್ಲ ಎಂಬಂತೆ, ಮೇಲೆ ತೋರಿಸಲು ಯಾರಿಗೂ ಸಾಹಸವಿರಲಿಲ್ಲ.

ಇಂತಹ ಗ್ರಾಮಕ್ಕೆ ಕಾಲಿಟ್ಟ ಕೂಡಲೇ ಚಿನ್ನಪ್ಪನು ಮೊದಲು ನೋಡಿದ್ದು ಒಂದು ಭವನವನ್ನು. ಅದರ ಬಾಗಿಲಿನ ಮೇಲೆ "ಧರ್ಮಛತ್ರ" ಎಂದು ದೊಡ್ಡ ದಾಗಿ ಬರೆಯಲಾಗಿತ್ತು.

ಚಿನ್ನಪ್ಪನು ಅದರೊಳಗೆ ಪ್ರವೇಶಿಸಿದ ಕೂಡಲೇ ಛತ್ರದ ನೌಕರನೊಬ್ಬ ವಿನಯದಿಂದ ಕಾಲು ತೊಳೆಯಲು ನೀರು ತಂದು ಕೊಟ್ಟನು. ಚಿನ್ನಪ್ಪನು ಕಾಲು ಮುಖ ತೊಳೆದುಕೊಳ್ಳುವಾಗ "ಊಟ ಮಾಡುವಿರಾ?" ಎಂದು ಕೇಳಿದ ನೌಕರ. "ಮಾಡು ತ್ತೇನೆ" ಎಂದ ಚಿನ್ನಪ್ಪ.

"ಹಾಗಾದರೆ ಮೊದಲು ಅಯ್ಯಾ ಅವರನ್ನು ನೋಡಿರಿ" ಎಂದು ನೌಕರನು ಛತ್ರದ ಅಧಿಕಾರಿಯ ಕೋಣೆಯನ್ನು ತೋರಿಸಿದನು. ಚಿನ್ನಪ್ಪನು ಅಲ್ಲಿಗೆ ಹೋದ ಕೂಡಲೇ ಅಧಿಕಾರಿ, ಅವನ ಊರು ಹೆಸರು ಮುಂತಾದುವನ್ನು ಕೇಳಿ ಬರೆದುಕೊಂಡು, "ಐದು ರೂಪಾಯಿ ಕೊಡು" ಎಂದನು.

"ಊಟಕ್ಕೆ ಬೆಲೆ ಐದು ರೂಪಾಯಿಯೇ? ಧರ್ಮಛತ್ರವೆಂದು ಹೊರಗೆ ಬರೆದಿಟ್ಟಿದ್ದೀರಲ್ಲಾ ಮತ್ತೆ?" ಎಂದು ಕೇಳಿದ ಚಿನ್ನಪ್ಪ.

ಅಧಿಕಾರಿ ನಗುತ್ತ, "ಇದು ಭೋಜನದ ಬೆಲೆ ಯಲ್ಲ. ಬೇಗದಲ್ಲೇ ಈ ಊರಿನಲ್ಲಿ ಒಂದು ಶಿವಾ ಲಯ ಕಟ್ಟಿಸಲಿದ್ದೇವೆ. ಅದಕ್ಕಾಗಿ ಈ ವಿಧವಾಗಿ ಹಣ ವಸೂಲು ಮಾಡಬೇಕೆಂದು ಈ ಛತ್ರದ ಧರ್ಮ ಕರ್ತರಾದ ಜಮೀನ್ದಾರರ ಅಪ್ಪಣೆ. ಇದು ಪುಣ್ಯ ಕಾರ್ಯತಾನೆ?" ಎಂದನು.

"ಊಟಕ್ಕೆ ಹಸಿವಾದಾಗ ಬರುತ್ತೇನೆ" ಎಂದು ಹೇಳಿ ಚಿನ್ನಪ್ಪನು ಊರೊಳಗೆ ನಡೆದನು. ಬೀದಿ ಹಿಡಿದು ನಡೆಯುತ್ತಿದ್ದ ಚಿನ್ನಪ್ಪನಿಗೆ ಒಂದು ದೃಶ್ಯವು ಕಂಡು ಬಂತು.

ಬಿ. ಎನ್ ರಾವ್



ಇಬ್ಬರು ದೃಢಕಾಯರಾದ ಮನುಷ್ಯರು ಒಂದು ದನವನ್ನು ಬಲವಂತವಾಗಿ ಎಳೆದುಕೊಂಡು ಹೋಗುತ್ತಿದ್ದರು. ಆ ದನದ ಒಡೆಯನಾದ ಬಡವನೊಬ್ಬ ಅಳುತ್ತಾ, ಎದೆ ತಲೆ ಬಡೆದುಕೊಳ್ಳುತ್ತಾ ಅವರಿಬ್ಬರ ಕೈಕಾಲಿಗೆ ಬೀಳುತ್ತಿದ್ದ. ಅವರಿಬ್ಬರೂ ಅವನನ್ನು ಬದಿಗೆ ದೂಡಿ, ದನವನ್ನು ದರದರನೆ ಎಳೆದುಕೊಂಡು ಹೋದರು.

ಚಿನ್ನಪ್ಪ ಆ ಬಡವನನ್ನು ನೋಡಿ ಕನಿಕರಕೊಂಡು ಅವನ ಬಳಿಗೆ ಹೋಗಿ, "ಯಾರವರು ? ನಿನಗೆ ಸಾಲಗೀಲ ಕೊಟ್ಟವರೇನು ?" ಎಂದು ಕೇಳಿದನು.

"ಸಾಲ ಕೊಟ್ಟವರಾದರೆ ನಾನೇಕೆ ಹೀಗೆ ಬಡಕೊಳ್ಳುತ್ತಿದ್ದೇ ? ಅದೇನಿಲ್ಲ. ಇದೆಲ್ಲಾ ನಮ್ಮ ಜಮೀನ್ದಾರ್ರು ಇಷ್ಟಪ್ರಕಾರದ ಆಟ. ಮೊನ್ನೆಯವರೆಗೆ ಧರ್ಮಸತ್ರ ಕಟ್ಟಿಸುತ್ತೇನೆ ಅಂತ ಊರ ಜನರ ರಕ್ತ ಹಿಂಡಿದರು. ಆದಾದ ಮೇಲೆ ಈಗ ಶಿವಾಲಯ ಕಟ್ಟಿಸುತ್ತೇನೆ ಅಂತ ಪ್ರಾರಂಭಿಸಿದ್ದಾರೆ. ಈಗಾಗಲೇ ಅವರು ವಸೂಲು ಮಾಡಿದ ಹಣದಿಂದ ಎಷ್ಟೋ ಶಿವಾಲಯ ಕಟ್ಟಿಸಬಹುದಿತ್ತು. ನನ್ನ ದನವನ್ನೇ ಶಿವಾಲಯದ ಚೆಂದಾಲೆಕ್ಕದಲ್ಲಿ ಒಯ್ದುಬಿಟ್ರು !" ಎಂದ ಆ ಬಡವ.

ಚಿನ್ನಪ್ಪನಿಗೆ ಬಹಳ ಕೋಪ ಬಂದಿತು. "ಹೀಗೆ ಬಡಜನರನ್ನು ಪೀಡಿಸಿ ಛತ್ರ ಕಟ್ಟುವುದೆಂದರೇನು ? ಆಲಯವೆಂದರೇನು ? ಅನ್ಯಾಯ !" ಎಂದನು.

"ಕೇಳುವ ತ್ರಾಣ ಯಾರಿಗಿದೆ? ಹಣವಿಲ್ಲದವರ ಮನೆಯಿಂದ ಹೀಗೇ ಜಾನುವಾರುಗಳನ್ನು ಎಳೆದುಕೊಂಡು ಹೋಗುತ್ತಾರೆ. ನಾವೇನಾದರೂ ದೂರಿ ಮಾತಾಡಿದ್ದು ಗೊತ್ತಾಗಿಬಿಟ್ರೆ ನಮಗೆ ಮಸಣವೇ ಗತಿ !" ಎಂದ ಬಡವ.

"ಧರ್ಮಛತ್ರದ ಯಜಮಾನ ಜಮೀನ್ದಾರ್ರಾದರೆ, ಛತ್ರದಲ್ಲಿ ಅಧಿಕಾರಿಯಾಗಿರುವವನು ಯಾರೋ ? ಅವನೂ ಒಬ್ಬ ಜಮೀನ್ದಾರನ ಹಾಗೇ ಇದ್ದಾನಲ್ಲ ?" ಎಂದು ಕೇಳಿದ ಚಿನ್ನಪ್ಪ.

"ಇಲ್ಲದೇನು ? ಅವನು ಜಮೀನ್ದಾರ್ರ ಬಾವಯ್ಯ. ಈಗ ನನ್ನ ದನವನ್ನು ಎಳೆದುಕೊಂಡು ಹೋದವರಿಬ್ಬರೂ ಜಮೀನ್ದಾರ್ರ ಅಚ್ಚುಮೆಚ್ಚಿನ ಬಂಟರು. ಊರವರ ಗಂಟಲಗಾಣರು !" ಎಂದ ಆ ಬಡವ.

ಜಮೀನ್ದಾರ, ಅವನ ಬಾವ, ಇಬ್ಬರು ಬಂಟರು ! ಈ ನಾಲ್ವರೂ ಸೇರಿ ಊರೊಳಗಿನ ಪಾಪದವರನ್ನು ಹಿಂಡಿ ಹಿಂಡಿ ಚೀಪುತ್ತಾರೆಂದು ಚಿನ್ನಪ್ಪನಿಗೆ ಅರ್ಥವಾಯಿತು. ಅವರನ್ನು ತನ್ನಿಂದ ಸರಿಮಾಡಲಿಕ್ಕಾಗುವುದೋ ಇಲ್ಲವೋ ನೋಡಿದಹೊರತು ಆ ಊರಿನಿಂದ ಹೋಗಬಾರದೆಂದುಕೊಂಡನು.

ಕೆಲವೇ ದಿನಗಳಲ್ಲಿ ಚಿನ್ನಪ್ಪನು ಗ್ರಾಮಸ್ಥರ ಪರಿಚಯಮಾಡಿಕೊಂಡನು. ಎಲ್ಲರಿಗೂ ಅವನು ಪ್ರಿಯ ಮಿತ್ರನಂತಾದನು. ಊರ ಜನರ ಸಹಾಯದಿಂದ ಅವನು ಒಂದು ನಾಟಕವಾಡಲು ಉಪಕ್ರಮಿಸಿದನು. ಒಂದು ದಿನ ಅವನು ಜಮೀನ್ದಾರನನ್ನು ನೋಡಿ,

ಧರ್ಮಛತ್ರದ ಮಾತೆತ್ತಿ "ಆಹಾ! ಏನು ಪುಣ್ಯಛತ್ರ ಕಟ್ಟಿಸಿದಿರಲ್ಲ! ನಿಜಕ್ಕೂ ಊಟಗೀಟ ಮುಂತಾದ ಸದುಪಾಯಗಳಿಗೆ ಹತ್ತುರೂಪಾಯಿ ಏನೂ ದೊಡ್ಡ ದಲ್ಲ. ಊಟವೂ ದಿವ್ಯವಾಗಿದೆ!" ಎಂದನು.

ಜಮೀನ್ದಾರನು ಬೆಚ್ಚಿಬಿದ್ದು, "ಏನದೂ? ಊಟಕ್ಕೆ ಹತ್ತತ್ತು ರೂಪಾಯಿ ತೆಕ್ಕೊಳ್ಳುತ್ತಾನೆಯೇ?" ಎಂದು ಕೇಳಿದನು.

"ಆದೊಂದು ಹೆಚ್ಚಲ್ಲವೆಂದೆನಲ್ಲ. ಅದು ಕೂಡಾ ಶಿವಾಲಯ ಕಟ್ಟಿಸುವ ಕಾಣಿಕೆ ಸೇರಿತಾನೇ? ಒಳ್ಳೇ ಪುಣ್ಯಕಾರ್ಯ ಬಿಡಿ!" ಎಂದ ಚಿನ್ನಪ್ಪ.

"ನಿನ್ನ ಮಾತು ನಿಜವಾಗಿದ್ದರೆ ಅವನ ಚರ್ಮ ಸುಲಿದುಹಾಕಿಬಿಡ್ತೇನೆ. ನಾನು ತೆಗೆದುಕೊಳ್ಳುವಂತೆ ಹೇಳಿದ್ದು ಐದು ರೂಪಾಯಿ ಮಾತ್ರ. ಹಾಗಾದರೆ ಅವನು ನನ್ನನ್ನು ಮೋಸಪಡಿಸುತ್ತಾನೆಂದಾಯಿತು!" ಎಂದ ಜಮೀನ್ದಾರ ಉಗ್ರನಾಗಿ.

ಚಿನ್ನಪ್ಪ ಆಶ್ಚರ್ಯದಿಂದ ಕಣ್ಣುಗಳನ್ನು ಅರಳಿಸಿ, "ಹಾಗೇನು? ಅಂದರೆ ಅರ್ಧಛತ್ರವನ್ನೇ ನುಂಗುವುದೆಂದಾಯಿತಲ್ಲಾ! ತಲಾ ಐದು ರೂಪಾಯಿ ಅಂದರೆ ಎಷ್ಟು ಕಡಿಮೆಯೆಂದರೂ ದಿನಕ್ಕೆ ಐವತ್ತು ಮಂದಿಗೆ ಮೇಲೆಯೇ ಛತ್ರಕ್ಕೆ ಬರುತ್ತಾರೆ! ಎಷ್ಟಾಯಿತು! ಎಷ್ಟು ದೊಡ್ಡ ಮೋಸ! ನೀವು ಒಳ್ಳೇಯವರು ಅಂತ ನಂಬಿದರೆ ಹೀಗೆ ಮಾಡುವುದುಂಟೇ? ಎಂಥಾ ದ್ರೋಹ!" ಎಂದನು.

ಜಮೀನ್ದಾರನಿಗೆ ಇನ್ನಿಷ್ಟು ಮತಿಗೆಟ್ಟು, "ಆಂ! ದಿನಕ್ಕೆ ಐವತ್ತು ಮಂದಿಯೇ? ಅಷ್ಟುಮಂದಿ ಬರುವರೆಂದು ಅವನು ಒಂದು ದಿನ ಕೂಡಾ ಲೆಕ್ಕ ಹೇಳಲಿಲ್ಲವಲ್ಲಾ?" ಎಂದನು.

"ನೀವು ಎಷ್ಟು ಸರಳ ಸ್ವಭಾವದವರು ಅಂತ ಅವನಿಗೆ ಗೊತ್ತಿದ್ದುದರಿಂದಲೇ ಇಷ್ಟು ಸುಲಭವಾಗಿ ನಿಮ್ಮನ್ನು ಮೋಸಪಡಿಸುತ್ತಾನೆಂದು ಕಾಣುತ್ತೆ. ಬೇಕಾದರೆ ನೀವು ನನ್ನೊಂದಿಗೆ ನಿಮ್ಮ ವಿಶ್ವಾಸದವ



ನೊಬ್ಬನನ್ನು ಕಳಿಸಿರಿ. ನಾನು ಹೇಳಿದ ಮಾತಿನ ಸತ್ಯ ಕಣ್ಣಾರೆ ನೋಡಬಹುದು. ನಾನು ನಾಲ್ಕು ದಿನಗಳಿಂದ ಆ ಛತ್ರದಲ್ಲೇ ಇದ್ದೇನಲ್ಲ." ಎಂದ ಚಿನ್ನಪ್ಪ.

ಜಮೀನ್ದಾರನು ಚಿನ್ನಪ್ಪನ ಮಾತನ್ನು ಪೂರ್ತಿ ನಂಬಿ, ಅವನೊಂದಿಗೆ ತನ್ನ ವಿಶ್ವಾಸದ ಮನುಷ್ಯನನ್ನೂ ಕಳುಹಿಸಿಕೊಟ್ಟನು. ಆದಿನ ಸಾಯಂಕಾಲ ಚಿನ್ನಪ್ಪ ಆ ಮನುಷ್ಯನೊಂದಿಗೆ ಛತ್ರದ ಎದುರಿನಲ್ಲಿ ಹೊಂಚಿ ನಿಂತನು.

ಇದಕ್ಕೆ ಮೊದಲೇ ಚಿನ್ನಪ್ಪನಿಂದ ತಯಾರಿಸಲ್ಪಟ್ಟ ನಾಟಕ ಪಾತ್ರಧಾರಿಗಳಾದ ಅನೇಕ ಯುವಕರು ಗುಂಪು ಗುಂಪಾಗಿ, ತಲೆಗೆ ಮುಂಡಾಸು ಕಟ್ಟಿಕೊಂಡು ಪ್ರಯಾಣಿಕರಂತೆ ಛತ್ರಕ್ಕೆ ಬರುವುದೂ, ಹೋಗುವುದೂ ಕಂಡು ಬಂತು. ಕೆಲವರು ಭೋಜನ ಮುಗಿಸಿ ಬಾಯಿ ಒರೆಸಿಕೊಳ್ಳುತ್ತಾ, ತೇಗುತ್ತಾ ಹೊರಗೆ ಬರವುದನ್ನೂ ಜಮೀನ್ದಾರನ ಆಳು ಬಹಳ ಹೊತ್ತು ನೋಡಿದನು. ಮೊದಲು ಬಂದವರೇ ಬೇರೆಬೇರೆ



ವೇಷಗಳಿಂದ ನಡಿಗೆಯ ರೀತಿಗಳಿಂದ ಬಂದು ಹೋದುದು ಅವನಿಗೆ ಗೊತ್ತಾಗಲಿಲ್ಲ.

ಅವನು ಜಮೀನ್ದಾರನ ಬಳಿಗೆ ಹೋಗಿ, "ಈ ಒಂದು ಹೊತ್ತಿನಲ್ಲೇ ಐವತ್ತು ಅರುವತ್ತು ಮಂದಿ ಪ್ರಯಾಣಿಕರು ಛತ್ರದಲ್ಲಿ ಊಟ ಮಾಡಿದರು. ಕಣ್ಣಾರೆ ಕಂಡೆ ಸ್ವಾಮಿ" ಎಂದನು.

ಈ ಮಾತು ಕೇಳಿದ ಕೂಡಲೇ ಜಮೀನ್ದಾರನ ಕಣ್ಣುಗಳು ಕೋಪಾತಿರೇಕದಿಂದ ಕೆಂಡವಾದುವು. ಅದನ್ನು ನೋಡಿ ಚಿನ್ನಪ್ಪ, "ಶಾಂತರಾಗಿ ಸ್ವಾಮಿ. ಈದಿನ ಬಂದವರ ಸಂಖ್ಯೆ ಎಷ್ಟು ಹೇಳುತ್ತಾನೆ ಅಂತ ನೋಡಿ, ಆಮೇಲೆ ತಕ್ಕ ಕ್ರಮ ತೆಗೆದುಕೊಳ್ಳುವುದು ಒಳ್ಳೆಯದೆಂದು ನನಗೆ ಕಾಣುತ್ತದೆ." ಎಂದು ಹೇಳಿ ಸಮಾಧಾನಗೊಳಿಸಿದನು. ಜಮೀನ್ದಾರನಿಗೂ ಚಿನ್ನಪ್ಪನ ಮಾತು ಸರಿಯೆನಿಸಿತು.

ಮಾರುದಿನ ಜಮೀನ್ದಾರನ ಬಳಿಗೆ ಅವನ ಬಾವ ಬಂದು ಧರ್ಮ ಛತ್ರದ ಲೆಕ್ಕವನ್ನು ತೋರಿಸಿದನು. ಮುಂಚಿನ ದಿನ ಛತ್ರದಲ್ಲಿ ಊಟ ಮಾಡಿದವರ ಸಂಖ್ಯೆ ಹನ್ನೆರಡು ಎಂದು ಲೆಕ್ಕದಲ್ಲಿತ್ತು. ಅದನ್ನು ನೋಡಿದ ಕೂಡಲೇ ಜಮೀನ್ದಾರನಿಗೆ ಕೋಪವು ಆವೇಶವಾಗಿ ಉಕ್ಕಿ, "ಎಷ್ಟು ದಿನದಿಂದ ಹೀಗೆ ಮೋಸಮಾಡುತ್ತಿದ್ದೆಯೋ ?" ಎಂದು ಗರ್ಜಿಸಿ ಕೊರಡೆ ತೆಗೆದುಕೊಂಡು ಧಡಧಡ ಹೊಡೆಯ ತೊಡಗಿದನು.

ಹೊಡೆತಗಳಿಗೆ ಕಾರಣ ತಿಳಿಯದೆ, ಏಟುಗಳ ನೋವನ್ನು ತಡೆಯಲಾಗದೆ, ಜಮೀನ್ದಾರನ ಬಾವ ಅಲ್ಲಿಂದ ಓಡಿಹೋದನು. ಅವನಿಗೆ ಏನು ಹೇಳಲಿಕ್ಕೂ ಕೇಳಲಿಕ್ಕೂ ಜಮೀನ್ದಾರನು ಅವಕಾಶವನ್ನೇ ಕೊಡಲಿಲ್ಲ.

ಅಷ್ಟರೊಳಗೆ ಚಿನ್ನಪ್ಪನು ಛತ್ರವನ್ನು ಸೇರಿ, ಜಮೀನ್ದಾರನ ಬಾವನಿಗೆ ಅನುತಾಪ ತೋರಿಸುತ್ತ, "ವಿಚಾರ ಸಾಚಾರವಿಲ್ಲದೆ ಹೊಡೆಯುವುದೆಂದರೇನು? ಅದೂ ಅವರಂತಹ ಪದವಿಯಲ್ಲೇ ಇರುವ ನಿಮ್ಮನ್ನು ಕೋಣವೆಂದುಕೊಂಡು ಹೊಡೆಯುವುದುಂಟೆ? ಒಂದು ನೋಡಿದರೆ ನಿಮ್ಮ ಪುಣ್ಯದಿಂದ ತಾನೇ ಅವರು ಇಂಥಾ ಸ್ಥಿತಿಗೆ ಬಂದಿದ್ದಾರೆ? ಏನಾದರೂ ನೀವು ಇದಕ್ಕೆ ತಕ್ಕ ಪ್ರತೀಕಾರ ಮಾಡದೇ ಹೋದರೆ ಹತ್ತು ಜನರ ನಡುವೆ ತಲೆಯೆತ್ತಿ ತಿರುಗಲು ಸಾಧ್ಯವೇ? ನಿಮ್ಮ ಮರ್ಯಾದೆಯನ್ನಾದರೂ ನೀವು ಕಾಪಾಡಿಕೋ ಬೇಕಲ್ಲ?" ಎಂದು ಧೂಪ ಹಾಕಿದನು.

ಚಿನ್ನಪ್ಪ ತನ್ನ ಹಿತಚಿಂತಕನೆಂದು ಭಾವಿಸಿ ಜಮೀನ್ದಾರನ ಬಾವ, "ಏನು ಮಾಡಿದರೆ ಸರಿಯಾಗಿರುತ್ತೋ ತಿಳಿಯೋದಿಲ್ಲಲ್ಲಾ ?" ಎಂದನು.

"ನನಗೊಂದು ವಿಷಯ ಗೊತ್ತಾಗಿದೆ. ಜಮೀನ್ದಾರ್ರಿಗೆ ಇಬ್ಬರು ವಿಶ್ವಾಸದ ಬಂಟರಿದ್ದಾರಲ್ಲ, ಅವರಿಬ್ಬರ ಹೊರತು ಊರೊಳಗೆ ಒಂದು ನರಹುಳವೂ ಸಹಾಯಕರಿಲ್ಲ. ನಿಮಗಾಗಿ ಪ್ರಾಣವನ್ನಾದರೂ ಕೊಡಲು ತಯಾರಾಗಬಲ್ಲ ಒಂದಿಪ್ಪತ್ತೈದು ಮಂದಿ

ಊರೊಳಗಿನ ಯುವಕರನ್ನು ನಾನು ಕರೆದುಕೊಂಡು ಬರಬಲ್ಲೆ. ಹೆದರಬೇಡಿ" ಎಂದ ಚಿನ್ನಪ್ಪ.

ಈ ಮಾತು ಕೇಳಿ ಜಮೀನ್ದಾರನ ಬಾವನಿಗೆ ಸ್ವಲ್ಪ ಧೈರ್ಯ ಕೂಡಿತು. "ನಿನ್ನ ಮಾತು ನಿಜವೇ. ನನಗೂ ಗೊತ್ತು. ಊರಜನರೆಲ್ಲಾ ಈ ಜಮೀನ್ದಾರ್ರ ನಾಶವನ್ನು ಎದುರು ನೋಡುವವರೇ. ನಾನೀಗಲೇ ಅವರ ಆಳ ನೋಡಿ ಬಿಡುತ್ತೇನೆ. ನನ್ನನ್ನು ಅವರ ನಾಯಿ ಅಂತ ತಿಳಿದಿದ್ದಾರೇನು ?" ಎನ್ನುತ್ತಾ ಅವನು ಕೊರಡೆಯನ್ನು ಎತ್ತಿಕೊಂಡನು.

"ಅವಸರ ಪಡಬೇಡಿ. ನಿಧಾನಿಸಿರಿ. ದುಡುಕಿದರೆ ವ್ಯವಹಾರ ಕೆಡುತ್ತದೆ. ನೀವು ಒಂದು ಕೆಲಸ ಮಾಡಿ, ಸಾಕು. ಧರ್ಮಛತ್ರ ಎಂಬ ಹೆಸರಿನ ಫಲಕದಲ್ಲಿ ಧರ್ಮಕರ್ತರೆಂದು ಇರುವ ಜಮೀನ್ದಾರ್ರ ಹೆಸರನ್ನು ಅಳಿಸಿ ನಿಮ್ಮ ಹೆಸರನ್ನು ಬರೆಯಿಸಿಬಿಡಿ. ಉಳಿದ ಕಥೆಯನ್ನು ನನಗೆ ಬಿಡಿ. ನಾನು ನಿಮ್ಮ ಕೂದಲು ಕೊಂಕದಂತೆ ನೋಡಿಕೊಳ್ಳುತ್ತೇನೆ" ಎಂದ ಚಿನ್ನಪ್ಪ.

ಜಮೀನ್ದಾರನ ಬಾವ ಚಿನ್ನಪ್ಪ ಹೇಳಿದಂತೆಯೇ ಕೂಡಲೇ ಮಾಡಿಸಿದನು. ಈ ಸಂಗತಿ ಮರು ನಿಮಿಷ ದಲ್ಲೇ ಜಮೀನ್ದಾರನಿಗೆ ಗೊತ್ತಾಯಿತು. ಅವನು ರೋಷಾವೇಶದಿಂದ ಕೊರಡೆ ತೆಗೆದುಕೊಂಡು, ತನ್ನ ವಿಶ್ವಾಸದ ಬಂಟರಿಬ್ಬರನ್ನೂ ಜತೆಗೆ ಕರೆದುಕೊಂಡು ಬೇಗಬೇಗನೇ ಧರ್ಮ ಛತ್ರಕ್ಕೆ ಬಂದನು.

ಹೆಸರಿನ ಫಲಕವನ್ನು ನೋಡಿ ಜಮೀನ್ದಾರನು, "ಯಾರೋ ನಿನಗಿಷ್ಟು ಧೈರ್ಯ ಕೊಟ್ಟವನು ? ಧರ್ಮಕರ್ತನೆಂದು ನಿನ್ನ ಹೆಸರು ಬರೆಸಿಕೊಳ್ಳ ಬೇಕಾದರೆ ಏನು ಧೈರ್ಯ ! ನಿನ್ನಪ್ಪನ ಗಂಟೇ ಇದು ? ಏಕೆ ಹೀಗೆ ಬರೆಸಿದೆ ?" ಎಂದು ಕೇಳಿದನು ಹಲ್ಲು ಕಡಿಯುತ್ತ.

"ಏಕೆ ಹೀಗೆ ಗೂಳೀ ಹಾಗೆ ಗುಟರೆ ಹಾಕ್ತೀರಿ ? ಇದು ನಿಮ್ಮ ಅಪ್ಪನ ಸೊತ್ತು ಅಂತ ಮಾಡಿದಿರೇನು? ಪ್ರಜೆಗಳ ಸೊತ್ತು. ಊರ ಜನರ ಹಣದಿಂದಾದ



ಛತ್ರ. ನಿರ್ವಹಣೆ ನೋಡಿಕೊಳ್ಳುವವನು ನಾನು. ಮಧ್ಯೆ ಧರ್ಮಕರ್ತ ಎನ್ನಲು ನಿಮಗೇನೂ ಹಕ್ಕಿಲ್ಲ ! ಬಾಯಿ ಮುಚ್ಚಿ ಹೋಗಿಬಿಡಿ !" ಎಂದು ಬಾವ ಹೇಳಿದ್ದು ಕೇಳಿ, ಜಮೀನ್ದಾರನಿಗೆ ಪಿತ್ಥಕೆದರಿ, "ಏನು ಬೊಗಳುವೆ ?" ಎಂದು ಕೂಗಿ ಮುಂದೆ ಹಾರಿದನು ಕೊರಡೆ ಬೀಸುತ್ತಾ. ಅದಕ್ಕೆ ಸಿದ್ಧನಾಗಿದ್ದ ಬಾವ ಜಮೀನ್ದಾರನ ಮೇಲೆ ತನ್ನ ಕೊರಡೆ ಬೀಸಿದ. ಆಗಲೇ ಜಮೀನ್ದಾರನ ಬಂಟರು ಬಾವನ ಮೇಲೆ ಹಾರಿದರು.

ಅದುವರೆಗೆ ಪ್ರೇಕ್ಷಕರಂತೆ ನೋಡುತ್ತಿದ್ದ ಚಿನ್ನಪ್ಪನ ಕಡೆಯ ಯುವಕರು ಜಮೀನ್ದಾರನ ಬಂಟರನ್ನು ಹಿಡಿದೆಳೆದು ಹೊಡೆದು ಬಡಿದು ಹಣ್ಣು ಮಾಡಿ ಓಡಿಸಿಬಿಟ್ಟರು. ಹೀಗಾಗುವುದೆಂದು ಊಹಿಸಿರದ ಜಮೀನ್ದಾರನು ಆ ಯುವಕರ ಗುಂಪನ್ನು ಕಣ್ಣು ತಿರುಗಿಸುತ್ತಾ ನೋಡಿದನು.

ಅದನ್ನು ನೋಡಿ ಬಾವ ಜಮೀನ್ದಾರನೊಂದಿಗೆ ವ್ಯಂಗ್ಯವಾಗಿ, "ಅವರನ್ನೇನು ನೋಡುವಿರಿ ಕಣ್ಣು

ಒಡೆದು ಹೋಗೋ ಹಾಗೆ? ಛತ್ರದ ಹೆಸರಿನಲ್ಲಿ ಶಿವಾಲಯದ ಹೆಸರಿನಲ್ಲಿ ಇವರೆಲ್ಲರ ರಕ್ತ ಹೀರಿದ್ದೀರಾ! ಇಷ್ಟರವರೆಗೆ ಸಹಿಸಿಕೊಂಡಿದ್ದರು. ನನ್ನ ರಕ್ತ ಕುಡೀಲಿಕ್ಕೆ ಬಂದಿರಿ! ಅದರ ಫಲ! ಇನ್ನು ಯಾರೂ ಸಹಿಸಲಾರರು. ಸಾಧುಮುನಿದರೆ ಕಾಡೇ ತಾಳದಂತೆ!" ಎಂದನು.

ಅದಕ್ಕೆ ಜಮೀನ್ದಾರನು "ನಾಚಿಗೆಯಿಲ್ಲದ ನಾಯಿ ನೀನು. ನೀನೇನು ಕಡಿಮೆ ತಿಂದವನೋ? ಛತ್ರದಲ್ಲಿ ಉಳಿದುಕೊಂಡ ಪ್ರಯಾಣಿಕರನ್ನೂ, ವರ್ತಕರನ್ನೂ ಕೊಳ್ಳೆ ಹೊಡೆದು, ಕಳ್ಳರು ಬಿದ್ದರೆಂದು ನೀನು ಪುಕಾರು ಕೊಟ್ಟವನಲ್ಲವೇ? ಛತ್ರ ಕಟ್ಟಿಸುವಲ್ಲಿ ಇದ್ದವರನ್ನು ಎಬ್ಬಿಸಲಿಕ್ಕೆ ಅವರ ಮನೆಗಳಿಗೆ ಬೆಂಕಿ ಹಚ್ಚಿದವನು ನೀನಲ್ಲವೇ? ಈಗ ಯಾವ ಮುಖದಿಂದ ಧರ್ಮೋಪದೇಶ ಮಾಡುತ್ತೀಯಾ?" ಎಂದನು.

"ಅಂಥ ಕಿರಾತ ನೀನೇ. ಆ ಕೆಲಸವೆಲ್ಲ ನೀನೇ ಮಾಡಿಸಿ ನನ್ನ ಮೇಲೆ ದೂರು ಹೇಳುವೆಯಾ? ಧೂರ್ತ! ನಿನ್ನ ಜಮೀನ್ದಾರಿಕೆಗೆ ಬೆಂಕಿ ಬೀಳ! ಓಡಿಬಿಡು, ನಿನ್ನ ಪ್ರಾಣ ಉಳೀಬೇಕಾದರೆ!" ಎಂದು ಕೋಪದಿಂದ ಚೀರಿದ ಬಾವ.

ಈ ವಿಧವಾಗಿ ದುಷ್ಟದ್ವಯರ ಘೋರ ಕೃತ್ಯಗಳು ಹೊರಬೀಳುತ್ತಿರುವಾಗ, ಜನರ ಸಹನೆ ಮೀರಿ ಅವರಿಬ್ಬರನ್ನೂ ಹೊಡೆಯಲು ನೋಡಿದರು.

ಚಿನ್ನಪ್ಪನು ಅವರನ್ನೆಲ್ಲ ಸಮಾಧಾನ ಪಡಿಸಿ, ಜಮೀನ್ದಾರನನ್ನೂ, ಅವನ ಬಾವನನ್ನೂ ನೋಡಿ ಹೀಗೆಂದನು:

"ನಿಜ ನೋಡಿದರೆ ನೀವಿಬ್ಬರೂ ಒಂದೇ ಬಗೆಯ ದುಷ್ಟರು. ನಿಮ್ಮಿಬ್ಬರ ತಪ್ಪುಗಳನ್ನು ನಿಮ್ಮ ನಿಮ್ಮ ಬಾಯಿಯಿಂದಲೇ ಕಕ್ಕಿದ್ದೀರಿ. ನಿಮಗೆ ಮಾನ ಮರ್ಯಾದಿ ಇದ್ದರೆ ಊರವರ ಮುಂದೆ ಮುಖ ತೋರಿಸಲಾರಿರಿ! ಇಬ್ಬರೂ ಬೇರೆಲ್ಲಿಗಾದರೂ ಹೋಗಿ ಮರ್ಯಾದೆಯಿಂದ ಬದುಕಿರಿ. ಜನರು ಸಾಧುಗಳಾಗಿ ಕಣ್ಣು ಮುಚ್ಚಿರುವವರೆಗಷ್ಟೇ ನಿಮ್ಮ ಆಟ. ಈಗ ಜನರು ಎಚ್ಚೆತ್ತರು. ಅದು ನಿಮಗಿನ್ನು ಅಪಾಯಕಾರಿ!"

ಈಗ ಜಮೀನ್ದಾರನೂ ಬಾವನೂ ಚಿನ್ನಪ್ಪನ ಕಡೆಗೆ ಕಣ್ಣು ಕಿಸಿದು, ಇದೆಲ್ಲಾ ಇವನ ನಾರದ ನಾಟವೋ? ಎಂಬಂತೆ ನೋಡಿ, ಇಬ್ಬರೂ ಬರಬರನೆ ಹೊರಟುಹೋದರು.

ಅವರಿಬ್ಬರೂ ಆ ಗ್ರಾಮವನ್ನು ಬಿಟ್ಟು ಹೋಗುವವರೆಗೂ ಇದ್ದು, ಆಮೇಲೆ ಚಿನ್ನಪ್ಪನು ತನ್ನ ನಾಯಿಯೊಂದಿಗೆ ಅಲ್ಲಿಂದ ಹೊರಟುಹೋಗಲು ಸಿದ್ಧನಾದನು. ಗ್ರಾಮಸ್ಥರು ಅವನನ್ನು ತುಂಬಾ ಹೊಗಳಿ ಉಪಚರಿಸಿ ಬಾಯಿ ತುಂಬಾ ಕೃತಜ್ಞತೆ ಹೇಳಿ ಕಳುಹಿಸಿದರು.





# ಔತಣದ ಹುಚ್ಚು

ಒಂದು ಊರಿನಲ್ಲಿ ಶೇಷಾಚಲನೆಂಬ ಯುವಕನಿದ್ದ. ಅವನಿಗೆ ಜೀವನ ಮಾರ್ಗಕ್ಕೆ ಒಂದು ಉದ್ಯೋಗವೂ ಇದ್ದಿತು. ಆದುದರಿಂದ ಮದುವೆಯನ್ನೂ ಮಾಡಿಕೊಂಡ. ಅವನಿಗೆ ಅದೇ ಊರಿನಲ್ಲಿ ಗಣಪತಿ ಎಂಬವನ ಪರಿಚಯವಾಯಿತು. ಪರಿಚಯವು ಸ್ನೇಹದಲ್ಲಿ ಪರಿಣಮಿಸಿತು. ಸ್ನೇಹವು ಬಲಗೊಳ್ಳುತ್ತಾ ಕಡೆಗೆ ಸರಿಸಮವೆಂಬ ಸ್ಪರ್ಧೆಗೆ ಮುಟ್ಟಿತು.

ಒಂದು ದಿನ ಗಣಪತಿ ತನ್ನ ಹೆಂಡತಿಯಾದ ಗಂಗಾವತಿಯೊಂದಿಗೆ ಶೇಷಾಚಲನ ಮನೆಗೆ ಬಂದು, ಮರುದಿನ ತಮ್ಮ ಮಗ ಬಾಬೂನ ಹುಟ್ಟಿದ ಹಬ್ಬದ ಔತಣಕ್ಕೆ ಬರಬೇಕೆಂದು, ಶೇಷಾಚಲನಿಗೂ ಅವನ ಹೆಂಡತಿ ಕಾವೇರಿಗೂ ಆಹ್ವಾನವಿತ್ತು, ಹೋದನು. ಹುಟ್ಟಿದ ಹಬ್ಬಕ್ಕೆ ಬರಿಗೈಯಲ್ಲಿ ಹೋಗುವುದು ಚೆನ್ನಾಗಿಲ್ಲವೆಂದುಕೊಂಡು ಮಗುವಿಗೆ ಅಂಗಿ, ಆಟದ ಸಾಮಾನು ಮತ್ತು ತಾವಿಬ್ಬರೂ ಹೊಸ ಬಟ್ಟೆ, ಸೀರೆಗಳನ್ನು ಕೊಂಡುಕೊಂಡು, ಒಳ್ಳೆಯ ಆಡಂಬರದಿಂದ ಚೆಂದಾಗಿ ಹೋದರು.

ಕಾವೇರಿಗೆ ಇಂತಹ ಔತಣ ಕೂಟಗಳೂ, ಅಲ್ಲಿಯ ವಿನೋದಗಳೂ ಹೊಸದು. ಅದರ ಮೇಲೆ ಗಣಪತಿಯ ಮನೆಯ ಅಂದಚಂದಗಳನ್ನೂ, ವೈಭವಗಳನ್ನೂ ನೋಡಿ ತನ್ನೊಳಗೇ ಮೆಚ್ಚಿದಳು. ಗಂಗಾವತಿ ಭರ್ಜರಿಯ ಪಟ್ಟೇಸೀರೆ ಧರಿಸಿ ಮೈ ತುಂಬಾ ಸೊಗಸಾಗಿ ಕಂಡಳು.

ಅಲ್ಲಿಗೆ ಬಂದಿದ್ದ ಪ್ರತಿಯೊಬ್ಬರೂ ಮಗುವಿನ ಕೈಗೆ ಏನೋ ಒಂದು ವಸ್ತುವನ್ನು ಕಾಣಿಕೆ ಕೊಡುತ್ತಿದ್ದರು. ಔತಣ ಮುಗಿದ ಮೇಲೆ ಒಂದು ಕಡೆಯಲ್ಲಿ ರಾಶಿ ಹಾಕಿದ್ದ ಕಾಣಿಕೆ ವಸ್ತುಗಳನ್ನು ನೋಡಿ ಕಾವೇರಿಯ ಕಣ್ಣು ಜಿಗೇಲ್ ಅಂದಿತು.

ಮನೆಗೆ ಬಂದ ಮೇಲೆ ಅವಳು ಗಂಡನೊಂದಿಗೆ, "ಔತಣ ಮಾಡೋದು ಅಂದ್ರೆ ಇಷ್ಟೊಂದು ಚೆನ್ನಾಗಿರುತ್ತೇ ಅಂತ ನನಗೆ ಗೊತ್ತೇ ಇರಲಿಲ್ಲ. ಅಲ್ಲಾ ಆ ಗಣಪತಿಗಿಂತ ನಾವೇನು ಕಡಿಮೇನೇ ? ಬೇಗದಲ್ಲೇ ನಾವೂ ಒಂದು ಔತಣ ಮಾಡೋಣ. ಇಲ್ಲದಿದ್ದರೆ ನಮ್ಮ ಮರ್ಯಾದಿ ಹೇಗೆ ಉಳಿದೀತು ? ಅಲ್ಲಿ ತಿಂದು ನೋಡಿ ಬಂದರೆ ಆಯಿತೆ ?" ಎಂದಳು.

ಹೆಂಡತಿಯ ಕೋರಿಕೆಯನ್ನು ನಿರಾಕರಿಸಲು ಶೇಷಾಚಲನಿಗೆ ಸಾಧ್ಯವಾಗಲಿಲ್ಲ. ಮುಂದೆ ಒಂದು ವಾರದೊಳಗೆ ಕಾವೇರಿ ಗಂಗಾವತಿಯ ಮನೆಗೆ ಹೋಗಿ,

ಎಂ. ಕೆ. ಈಶ್ವರರಾವ್

"ನಾಳೆ ನನ್ನ ಹುಟ್ಟಿದ ಹಬ್ಬ. ಔತಣಕ್ಕೆ ಆಗತ್ಯ ಬರಬೇಕು" ಎಂದು ಹೇಳಿ, ಅವಳನ್ನೂ ಜತೆಗೆ ಕರೆದುಕೊಂಡು, ಅವಳ ಸಹಾಯದಿಂದ ಸುತ್ತು ಪಕ್ಕದಲ್ಲಿರುವ ಅವಳ ಪರಿಚಿತರನ್ನೂ ತನ್ನ ಪರಿಚಿತರನ್ನೂ ತನ್ನ ಮನೆಯ ಹುಟ್ಟಿದ ಹಬ್ಬಕ್ಕೆ ಕರೆಗೊಟ್ಟು ಬಂದಳು.

ತನ್ನ ಹುಟ್ಟಿದ ಹಬ್ಬದ ಕೂಟವನ್ನು ಬಲು ಗೌಜಿಯಿಂದ ಮಾಡಿದಳು ಕಾವೇರಿ. ಆಹ್ವಾನಿಸಿದವರು ಇಪ್ಪತ್ತು ಮೂವತ್ತು ಮಂದಿ ಕಾಣಿಕೆಗಳೊಂದಿಗೆ ಬಂದಿದ್ದರು. ಅವರೆಲ್ಲಾ ಔತಣವನ್ನು ಸವಿದು ಮುಖ ತುಂಬಾ ಹೊಗಳಿ ಹೋಟುಹೋದರು. ಕಾವೇರಿಯ ಮುಖ ಇಷ್ಟಗಲವಾಯಿತು.

ಅಲ್ಲಿಂದ ಗಂಗಾವತೀ ಕಾವೇರಿಯರು ಏನೋ ಒಂದು ಹಬ್ಬದ, ಪೂಜೆಯ ನೆವದಲ್ಲಿ ಆಗಾಗ ಔತಣಗಳನ್ನು ನಡೆಸತೊಡಗಿದರು. ನೆವನಗಳು ಸಿಗುತ್ತಿದ್ದರೆ ಇನ್ನೂ ಅನೇಕ ಹಬ್ಬದ ಔತಣ ಮಾಡುತ್ತಿದ್ದರು. ಹಾಗೇ ಹೀಗೆ ಅಂತ ಒಂದು ವರುಷವಾಗುವಷ್ಟರಲ್ಲಿ ಇಬ್ಬರ ಗಂಡಂದಿರೂ ಈ ಔತಣಗಳ ನಡುವೆ ಸಿಕ್ಕಿ ತುಂಬಾ ಸೋತುಹೋದರು. ಅವರಿಬ್ಬರೂ ಒಂದು ಸಾರಿ ಪೇಟೆ ಬೀದಿಯಲ್ಲಿ ಕಲೆತುಕೊಂಡಾಗ ತಮ್ಮ ತಮ್ಮ ಹೆಂಡತಿಯರನ್ನು ಕುರಿತು ಒಬ್ಬರೊಡನೊಬ್ಬರು ಹೇಳಿಕೊಂಡರು.

"ನನ್ನ ಹೆಂಡತಿಗೆ ಈ ಔತಣದ ಹುಚ್ಚು ಯಾವಾಗ ಬಿಡುಗಡೆಯಾಗುತ್ತೋ ಏನೋ! ನನ್ನ ಪ್ರಾಣವನ್ನೇ ತೋಡುತ್ತಾಳಪ್ಪಾ! ದೇವರೇ ಗತಿ!" ಎಂದು ನಿಟ್ಟುಸಿರು ಬಿಟ್ಟ ಗಣಪತಿ.

"ನನ್ನ ಹೆಂಡ್ತಿ ಮಾತ್ರ ಕಡಿಮೆಯವಳಲ್ಲಪ್ಪಾ! ನಿನ್ನ ಹೆಂಡತಿಯ ಧರ್ಮದಿಂದ ನನ್ನವಳಿಗೂ ಅದೇ ಹುಚ್ಚು ಹಿಡಿದಿದೆ. ನನ್ನ ಅವಸ್ಥೆ ಏನು ಹೇಳಲಿ?" ಎಂದ ಶೇಷಾಚಲ.

"ನಿನ್ನ ಹೆಂಡತಿ ಎಲ್ಲೆಲ್ಲಿಂದಲೋ ಬರುವ ಬಹುಮಾನ ವಸ್ತುಗಳಿಗಾಗಿಯೇ ಈ ಔತಣ ಮಾಡುವುದಂತೆ. ಏನೋಪ್ಪ, ಹಾಗೆ ಹೇಳುತ್ತಾಳೆ ನನ್ನ ಹೆಂಡತಿ" ಎಂದ ಗಣಪತಿ.



"ನಿನ್ನ ಹೆಂಡತಿ ತನ್ನ ನಗನಟ್ಟು ತೋರಿಸಲಿಕ್ಕೇ ಔತಣ ಮಾಡುವುದೆಂದು ನನ್ನವಳೂ ಹೇಳುತ್ತಾಳೆ" ಎಂದ ಶೇಷಾಚಲ.

"ನಿನ್ನ ಹೆಂಡತಿಯ ಹುಚ್ಚನ್ನು ಸುಲಭವಾಗಿ ಬಿಡಿಸಿ ಬಿಡಬಹುದು" ಎಂದು ಹೇಳಿ ಗಣಪತಿ ಶೇಷಾಚಲನ ಕಿವಿಯಲ್ಲಿ ಏನೋ ಒಂದು ಉಪಾಯವನ್ನು ಹೇಳಿದನು.

ಅದಾದ ಮೇಲೆ ಒಂದು ದಿನ ಕಾವೇರಿ ಏರ್ಪಡಿಸಿದ ಔತಣಕ್ಕೆ ಹೋಗಲು ಗಂಗಾವತಿ ಸೀರೆ ರವಿಕೆಗಳನ್ನು ಧರಿಸಿ, ನಗಗಳಿಗಾಗಿ ಪೆಟ್ಟಿಗೆಯನ್ನು ತೆರೆದು ನೋಡಿ "ಅಯ್ಯಯ್ಯೋ!" ಎಂದು ಚೀರಿದಳು. ಪೆಟ್ಟಿಗೆಯಲ್ಲಿ ಒಂದೇ ಒಂದು ನಗ ಕೂಡಾ ಇರಲಿಲ್ಲ.

ಅವಳು ಶೋಕರಾಗದೊಂದಿಗೆ ಖಾಲೀಯಾದ ನಗದ ಪೆಟ್ಟಿಗೆಯನ್ನು ಗಣಪತಿಯ ಮುಂದೆ ಇಟ್ಟು, "ಇದರಲ್ಲಿದ್ದ ನಗಗಳೆಲ್ಲ ಏನಾದುವು? ಸತ್ಯ ಹೇಳಿ!" ಎಂದು ಕೋಪದಿಂದ ಕೇಳಿದಳು. "ನಗಗಳೇ? ಇನ್ನೆಲ್ಲಿಯ ನಗಗಳು? ಇಷ್ಟು ದಿನಗಳವರೆಗೆ ಇದ್ದದ್ದೇ ಹೆಚ್ಚು! ಅದಕ್ಕಾಗಿ ಸಂತೋಷಪಡುವುದು ಬಿಟ್ಟು ನಗಗಳಿಲ್ಲದ್ದು ನೋಡಿ ಅಳುವುದೆಂದರೇನು? ಮರ್ಯಾದೆ ಮುಖ್ಯವಲ್ಲವೇ? ಮರ್ಯಾದೆ ಕಾಪಾಡಲಿಕ್ಕೇ ನಗಗಳು ಹೋದುವು. ನೀನು ತಿಂಗಳಿಗೆ ಎರಡು ಮೂರು ಸಾರಿ ಏನೋ ಒಂದು ಔತಣ ನಡೆಸುತ್ತಾ, ಇತರರ ಮನೆಯ ಔತಣಗಳಿಗೆ ಹೋಗುತ್ತಾ ಇರುವುದಕ್ಕೆಲ್ಲ ಬೇಕಾದ ಹಣ ಎಲ್ಲಿಂದ ಬರುತ್ತದೆಂದುಕೊಂಡೆ? ನನ್ನ ಯಜಮಾನರ ಹತ್ತಿರ ಸಾಲ ಕೇಳುತ್ತಾ ಇದ್ದೆ. ಸಾಲ ಎರಡು ಸಾವಿರದವರೆಗೆ ಆಯಿತು. ಅದೆಲ್ಲಾ ತೀರಿಸದಿದ್ದರೆ ಕಾನೂನು ಕ್ರಮಕ್ಕಿಳಿಯ ಬೇಕಾಗುತ್ತದೆ ಅಂತ ಯಜಮಾನ್ರು ಜೋರು ಮಾಡಿದರು. ಅದಕ್ಕೇ ನಗಗಳನ್ನೆಲ್ಲಾ ಒತ್ತೆ ಇಟ್ಟು ಸಾಲ ಪೂರಾ ತೀರಿಸಿದೆ. ತಾಹತ್ತು ನೋಡದೆ ಖರ್ಚು ಮಾಡುತ್ತಾ ಇದ್ದರೆ ಹೀಗೇ ಆಗೋದು. ಇನ್ನು ನಾವು ಎರಡು ಮೂರು ವರ್ಷಗಳವರೆಗೆ ಲೆಕ್ಕದೊಳಗಿದ್ದರೇನೇ ನಗಗಳನ್ನು ಬಿಡಿಸಿಕೊಂಡು ಬರಬಹುದು" ಎಂದ ಗಣಪತಿ. ತಾನು ನಗಗಳನ್ನು



ಅಡಗಿಸಿಟ್ಟಿರುವುದರ ಗುಟ್ಟುಮಾತ್ರ ಬಿಡಲಿಲ್ಲ. ನಗಗಳ ಗತಿ ಹಾಗಾದುದಕ್ಕೆ ಗಂಗಾವತಿ ಸಾಯಂ ಕಾಲದ ವರೆಗೂ ಅತ್ತು ತೀರಿಸಿದಳು. ಅವನೂ ಸಾಕಷ್ಟು ಸಮಾಧಾನದ ಹಿಮ್ಮೇಳ ಹಾಡಿದ. ಇನ್ನು ಈ ಜನ್ಮದಲ್ಲಿ ಔತಣಗಳ ಗೊಡವೆಗೆ ಹೋಗಬಾರ ದೆಂದು ಅವಳು ನಿಶ್ಚಯಿಸಿದಳು ಕಡೆಗೆ.

ಶೇಷಾಚಲ ಏನು ಮಾಡಿದನೆಂದರೆ, ಆದಿನ ಅವನು ತನ್ನ ಹೆಂಡತಿಗೆ ತಿಳಿಯದಂತೆ, ತನ್ನ ಮನೆಗೆ ಔತಣಕ್ಕೆ ಕರೆಯಲ್ಪಟ್ಟವರ ಮನೆಗಳಿಗೆ ಹೋಗಿ, "ನೀವು ಪ್ರತಿ ಔತಣಕ್ಕೂ ಬಹುಮಾನಗಳನ್ನು ತರುವುದೇನೂ ಚೆನ್ನಾಗಿಲ್ಲ. ನೀವು ಹೀಗೆ ಬಹುಮಾನ ತರುವುದಾದರೆ ಔತಣಕ್ಕೇ ಬರಬಾರದು" ಎಂದು ಅಭಿಮಾನ ನಟಿ ಸುತ್ತಾ ಒತ್ತೊತ್ತಿ ಹೇಳಿದ. ಬಹುಮಾನದ ಪೀಡೆ ಹೋಯಿತೆಂದು ಎಲ್ಲರೂ ಸಂತೋಷಿಸಿದರು.

ಆಮೇಲಿ ಶೇಷಾಚಲನ ಮನೆಗೆ ಔತಣಕ್ಕೆ ಬಂದವ ರೆಲ್ಲರೂ ಬರಿ ಗೈಯಿಂದಲೇ ಬಂದು ಉಂಡು ತಿಂದು ಹೊಗಳಿ ಹೋದುದನ್ನು ನೋಡಿ, ಕಾವೇರಿಯ ಉತ್ಸಾಹವೆಲ್ಲಾ ತಣ್ಣಗಾಗಿ ಹೋಯಿತು. ಯಾರಿಗೆ ಬೇಕು ಇವರೆಲ್ಲರ ಈ ಒಣ ಹೊಗಳಿಕೆ ಎಂದು ತನ್ನೊಳಗೇ ಉರಿಕಾರಿಕೊಂಡಳು.

ಎಲ್ಲರೂ ಹೊರಟುಹೋದ ಮೇಲೆ ಅವಳು ಶೇಷಾಚಲನೊಂದಿಗೆ, "ಎಲ್ಲರಿಗೂ ಎಂಥ ಕೇಡುಕಾಲ ಬಂತೋ ಏನೋ! ಒಬ್ಬರಾದರೂ ಒಂದು ಕಾಣಿಕೇನೂ ತಾರದೆ ಮರ್ಯಾದೆಗೆಟ್ಟು ತಿಂದು ಹೋದರು! ಏನು ಪಿಸುಣಾರಿಗಳಪ್ಪ! ಒಬ್ಬರನ್ನು ನೋಡಿ ಎಲ್ಲ ರೊಟ್ಟಿಗೆ ಮಾಡಿದ ಹಾಗಿದೆ!" ಎಂದಳು ಕೋಪದಿಂದ.

"ನೀನೊಬ್ಬಳು ಹುಚ್ಚಿ! ಈ ಔತಣವೆಲ್ಲಾ ಇನ್ನೊಬ್ಬರ ಬಹುಮಾನದ ಆಶೆಗಾಗಿಯೋ ಮಾಡುವುದು? ಔತಣಕ್ಕಾಗುವ ಖರ್ಚಿನಿಂದಲೇ ನಿನಗೆ ಇಷ್ಟವಾದುದನ್ನೆಲ್ಲಾ ತೆಗೆದುಕೊಳ್ಳಬಹುದಲ್ಲ? ಬೆಲೆಯೇರಿಕೆಯ ಈ ಕಾಲದಲ್ಲಿ ಇಂಥಾ ಅನಾವಶ್ಯಕ ಖರ್ಚುಗಳೆಲ್ಲಾ ಏತಕ್ಕೆ ಹೇಳು? ಇನ್ನೂ ಒಂದು ಹತ್ತು ಔತಣ ಹೀಗೆ ಮಾಡುತ್ತಾಹೋದರೆ ನಾವು ದಿವಾಳಿ ಎತ್ತ ಬೇಕಾಗುತ್ತೆ!" ಎಂದು ಶೇಷಾಚಲ ತನ್ನ ಹೆಂಡತಿಗೆ ಮೆತ್ತಗೆ ಬುದ್ಧಿ ಹೇಳಿದ.

ಗಂಡನ ಮಾತು ನಿಜವೆಂದು ತೋರಿ ಕಾವೇರಿಗೂ ಔತಣದ ಮೇಲೆ ಅಸಹ್ಯ ಹುಟ್ಟಿತು. ಒಂದೇಬಾರಿಗೆ ಗಂಗಾವತೀ ಕಾವೇರಿಯರ ಮನೆಗಳಲ್ಲಿ ಔತಣಗಳು ನಿಂತುಹೋದುವು.

ಗಣಪತಿಯೂ ಶೇಷಾಚಲನೂ ತಮ್ಮ ಉಪಾಯ ಗಳು ಜಯಪ್ರದವಾದುಕ್ಕೆ ಸಂತೋಷದಿಂದ, ಕೊನೆಯ ದಾಗಿ ಒಂದು ಔತಣದ ಏರ್ಪಾಡು ಮಾಡಿ, ಅಲ್ಲಿಂದ ಔತಣಕ್ಕೆ ಸ್ವಸ್ತಿ ಹೇಳಿಕೊಂಡರು.



# ಮಾವಯ್ಯನಿಗೆ ತಕ್ಕ ಸೊಸೆ

**ಸೋ**ಮಪುರದಲ್ಲಿ ಶ್ರೀಕಂಠಯ್ಯನೆಂಬ ವರ್ತಕನು ಪೈಸೆಗೆ ಪೈಸೆ ಕೂಡಿಸಿ, ಏನೂ ಖರ್ಚು ಮಾಡದೆ ಕೆಲವು ಲಕ್ಷ ಸೇರಿಸಿಟ್ಟಿದ್ದ. ಅವನಿಗೆ ಒಬ್ಬನೇ ಮಗ.

ಪ್ರಾಯಕ್ಕೆ ಬಂದ ಮಗನಿಗೆ ಮದುವೆ ಮಾಡಬೇಕಿತ್ತು. ತನಗೆ ಬರುವ ಸೊಸೆ ತನ್ನ ಹಾಗೆಯೇ ಮಿತ ಖರ್ಚಿನವಳಾಗಿ, ಸಂಸಾರವನ್ನು ನಾಜೂಕಾಗಿ ನಡೆಸುವಳೋ ಇಲ್ಲವೋ ಎಂಥವಳೋ ಎಂದು ಶ್ರೀಕಂಠಯ್ಯನಿಗೆ ದಿಗಿಲು ಹಿಡಿಯಿತು. ತನಗೆ ಹಿಡಿಸುವಂಥ ಹುಡುಗಿಗಾಗಿ ಅವನು ಮಗನನ್ನು ತನ್ನೊಂದಿಗೆ ಕರೆದುಕೊಂಡು ಊರಿಂದೂರಿಗೆ ಅಲೆಯ ತೊಡಗಿದ.

ಎಷ್ಟೋ ಸಂಬಂಧಗಳನ್ನು ನೋಡಿದ್ದಾಯಿತು. ಶ್ರೀಮಂತರ ಮನೆಯ ಹುಡುಗಿಯರ ಆಡಂಬರ ನೋಡಿ ಅವನಿಗೆ ಚಳಿ ಹಿಡಿಯಿತು. ಅಂತಹ ಹುಡುಗಿಯನ್ನು ತಂದುಕೊಂಡರೆ ದಿನ ಬೆಳಗಾಗುವುದರೊಳಗೆ ಇರುವುದೆಲ್ಲಾ ಆರತಿ ಕರ್ಪೂರವಾದೀತಲ್ಲ. ಅಂತೂ ಎಲ್ಲಿಯೂ ಸಂಬಂಧ ಕುದರದೆ ಅವನು ನಿರಾಶೆಯಿಂದ ಹಿಂದಿರುಗುತ್ತ, ದಾರಿಯಲ್ಲಿ ಒಬ್ಬ ಸ್ನೇಹಿತನ ಮನೆಯಲ್ಲಿ ಉಳಿದುಕೊಂಡ.

ಆ ಸ್ನೇಹಿತನಿಗೆ ಮದುವೆಯ ವಯಸ್ಸಿನ ಮಗಳಿದ್ದಳು. ಗೇರುಬೀಜದಷ್ಟು ಗಟ್ಟಿಗಿತ್ತಿ ಅವಳು. ಮದುವೆಯ ವರನಾದ ತನ್ನ ಮಗನನ್ನು ಎದುರು ಕೂಡಿಸಿಕೊಂಡು ಅವಳು ಏನೋ ಕೇಳುತ್ತ ಲೆಕ್ಕಮಾಡುವುದನ್ನು ನೋಡಿ, ಅದೇನೆಂದು ಕೇಳಿದ ಶ್ರೀಕಂಠಯ್ಯ.

"ಮತ್ತೇನಿಲ್ಲ. ನೀವು ನಿಮ್ಮ ಮಗನ ಮದವೆಗಾಗಿ ಊರೂರು ತಿರುಗಿ ಸ್ವಲ್ಪ ಹಣ ಖರ್ಚು ಮಾಡಿದಿರಲ್ಲವೆ? ಈಗ ನೀವು ನಮ್ಮಲ್ಲಿರುವುದರಿಂದ ನಮಗೂ ಸ್ವಲ್ಪ ಖರ್ಚಾಗುತ್ತದೆ. ಈ ನಷ್ಟವನ್ನು ಹೇಗೆ ಸರಿ ಮಾಡುವುದೂ ಅಂತ ನಿಮ್ಮ ಮಗನ ಹತ್ತಿರ ಆಲೋಚನೆ ಮಾಡುತ್ತೇನೆ" ಎಂದಳು ಆ ಹುಡುಗಿ.

ಇವಳೇ ತನಗೆ ತಕ್ಕ ಸೊಸೆ ಎಂದು ಶ್ರೀಕಂಠಯ್ಯ ನಿಶ್ಚಯಿಸಿಕೊಂಡ.

ಬಲು ಚಟುಕಿನಲ್ಲಿ ಅವರಿಬ್ಬರ ಮದುವೆಯೂ ಆಯಿತು.





# ಅಳಿಯನ ಕೂಗೆ

ಒಂದು ಊರಿನಲ್ಲಿ ದೊಡ್ಡ ಕುಟುಂಬಿಯಾದ ರಂಗ ರಾಜನೆಂಬವನಿದ್ದ. ಅವನಿಗೆ ಹತ್ತು ಮಕ್ಕಳಿದ್ದರು. ಹಿರಿಯವರೆಲ್ಲ ಸರಿಸೆಯಾಗಿ ಆರು ಮಂದಿಯವರೆಗೆ ಹೆಣ್ಣು ಮಕ್ಕಳೇ. ಪುಣ್ಯಕ್ಕೆ ರಂಗರಾಜನು ಅಂಥ ಬಡವನಾಗಿರಲಿಲ್ಲ. ನೂರು ಎಕರೆವರೆಗೆ ಒಳ್ಳೆಯ ಬೆಳೆ ಬರುವ ಹೊಲಗದ್ದೆಗಳು ಅವನಿಗಿದ್ದುವು.

ಹೀಗಿರುವಾಗ ದೊಡ್ಡ ಮಗಳಿಗೆ ಮದುವೆ ಯಾಯಿತು. ಮತ್ತೆ ಕೆಲವೇ ದಿನಗಳಲ್ಲಿ ರಂಗರಾಜನು ಯಾವುದೋ ದೀರ್ಘವ್ಯಾಧಿಗೆ ಗುರಿಯಾಗಿ ಹಾಸಿಗೆ ಹಿಡಿದನು. ಮನೆತನದ ವಹಿವಾಟು ನೋಡಿ ಕೊಳ್ಳಲು ದೊಡ್ಡ ಮಗನಿಗೆ ಪ್ರಾಯ ಬಂದಿರಲಿಲ್ಲ. ಆದುದರಿಂದ ಅವನು ತನ್ನ ದೊಡ್ಡ ಅಳಿಯನನ್ನು ತನ್ನ ಮನೆಯಲ್ಲೇ ಇದ್ದು ಮನೆಭಾರ ಹೊರುವಂತೆ ಕೇಳಿಕೊಂಡನು. ದೊಡ್ಡ ಮನೆತನದ ಯಜಮಾನಿಕೆ ದೊರೆಯಿತೆಂಬ ಸಂತೋಷದಲ್ಲಿ ದೊಡ್ಡ ಅಳಿಯ ರಾಜಯ್ಯ ಅದಕ್ಕೆ ಒಪ್ಪಿದ. ಅವನು ಒಳ್ಳೆಯ ವ್ಯವಹಾರ ದಕ್ಷನಾಗಿಯೂ ಇದ್ದನು. ಆದುದರಿಂದ ಮಾವಯ್ಯನ ವ್ಯವಹಾರಗಳನ್ನು ಅರ್ಥಮಾಡಿ ಕೊಳ್ಳಲು ಅವನಿಗೆ ಬಹಳ ದಿನ ಬೇಕಾಗಿರಲಿಲ್ಲ. ಎಲ್ಲಾ ಲೆಕ್ಕ ಹಾಕಿಕೊಂಡ ಮೇಲೆ ಅವನು ಕುಟುಂಬ ದೊಳಗೆ ಮಿತವ್ಯಯವನ್ನು ಅವಲಂಬಿಸಬೇಕೆಂದು ಕೊಂಡು, ಅದಕ್ಕೆ ತಕ್ಕ ಹಾಗೆ ಕೆಲವು ಪದ್ಧತಿಗಳನ್ನು ಅಮಲಿಗೆ ತಂದನು. ವರ್ಷಕ್ಕೆ ಮೂರುಸಾರಿ ಮಾತ್ರ ಹೊಸ ಬಟ್ಟೆಗಳು. ವಾರಕ್ಕೊಮ್ಮೆ ವಿಶೇಷ ಅಡಿಗೆ.

ರಂಗರಾಜನ ಹೊಲಗದ್ದೆಗಳನ್ನೂ ಪಶುಗಳನ್ನೂ ನೋಡಿಕೊಳ್ಳಲು ಮೂವತ್ತು ಮಂದಿ ನೌಕರರಿದ್ದರು. ಅವರೆಲ್ಲರಿಗೂ ರಂಗರಾಜನ ಮೇಲೆ ಭಕ್ತಿವಿಶ್ವಾಸ ಗಳಿದ್ದುವು. ಆದರೂ ರಾಜಯ್ಯನು ಗದ್ದುಗೆಯ ಅಡಿ ಯಲ್ಲಿರುವ ಹೆಗ್ಗಣದಂತೆ ಸಾಧ್ಯವಾದಷ್ಟು ಮಾವ ಯ್ಯನ ಸೊತ್ತನ್ನು ಗಂಟು ಕಟ್ಟಿಕೊಳ್ಳುತ್ತಿದ್ದನು. ಅದಕ್ಕಾಗಿಯೇ ಎಲ್ಲದರಲ್ಲಿಯೂ ಮಿತವ್ಯಯ ನ್ಯಾಯವನ್ನು ತೂರಿಸುತ್ತಿದ್ದನು. ರಂಗರಾಜನ ಉಳಿದ ಐವರು ಹೆಣ್ಣು ಮಕ್ಕಳಲ್ಲಿ ನಾಲ್ವರಿಗೂ ರಾಜ ಯ್ಯನೇ ಮದುವೆ ಮಾಡಿಸಿದ್ದನು. ಆ ನಾಲ್ಕು ಮಂದಿ ಅಳಿಯಂದಿರೂ ತನ್ನ ಹಿಡಿತದಲ್ಲಿರತಕ್ಕವರೆಂದು ನೋಡಿಯೇ ಮಾಡಿಸಿದ್ದನು. ಅವನ ಹಿರಿತನದಲ್ಲಿ ತಾವಾರೂ ತಲೆ ಹಾಕದಿದ್ದರೇನೇ ತಮಗೆ ಸುಖ ವೆಂದುಕೊಂಡು ಅವರೂ ಸುಮ್ಮನಿದ್ದರು.

" ವಸುಂಧರ "

ಹೀಗಿರುವಾಗ ರಂಗರಾಜನ ಆರನೇ ಮಗಳಿಗೆ ಮಾತ್ರ ರಾಜಯ್ಯನ ಇಷ್ಟದಂತೆ ಮದುವೆ ಮಾಡಲು ಸಾಧ್ಯವಾಗಲಿಲ್ಲ. ಆ ಹುಡುಗಿ ವೀರರಾಜನೆಂಬವನನ್ನು ಪ್ರೇಮಿಸಿ ಅವನ ಹೊರತು ಬೇರೆ ಯಾರನ್ನೂ ಮಾಡಿಕೊಳ್ಳಲಾರೆನೆಂದು ಪಟ್ಟುಹಿಡಿದಳು. ಹಾಗೆ ವೀರರಾಜನು ಚಿಕ್ಕಳಿಯನಾಗಿ ಬಂದ ಮೇಲೆ ರಾಜಯ್ಯನಿಗೆ ಕಷ್ಟಗಳು ಪ್ರಾರಂಭವಾದುವು.

ವೀರರಾಜನು ಎಲ್ಲ ಅಳಿಯಂದಿರಿಗಿಂತ ಚಿಕ್ಕವನಾದರೂ ಒಳ್ಳೆಯ ಬುದ್ಧಿ ತೀಕ್ಷ್ಣತೆಯುಳ್ಳವನು. ಅವನು ರಾಜಯ್ಯನ ಪ್ರತಿಯೊಂದು ಕೆಲಸವನ್ನೂ ಒಂದು ಕಣ್ಣಿನಲ್ಲಿ ನೋಡುತ್ತ, ಅದೇಕೆ ಹಾಗೆ ಅದೇಕೆ ಹೀಗೆ ಎಂದು ಕೆದರಿಕೆದರಿ ಕೇಳತೊಡಗಿದನು.

ಇದರಿಂದಾಗಿ ರಾಜಯ್ಯನ ಹಿರಿತನಕ್ಕೆ ಅಡಿಗಡಿಗೂ ಅಡ್ಡಗಲ್ಲು ಬೀಳತೊಡಗಿತು. ಹೀಗೇ ಬಿಟ್ಟರೆ ಅವನಿಂದ ತನಗೆ ಮುಂದೆ ದೊಡ್ಡ ಅಪಾಯವಾದೀತೆಂದು ಭಾವಿಸಿ ಅವನು ಮಾವಯ್ಯನೊಂದಿಗೆ, "ನೋಡುತ್ತಿದ್ದೀರಷ್ಟೇ ಮಾವಯ್ಯಾ, ಇತ್ತೀಚೆಗೆ ನಮಗೆ ಹಣದ ಮುಗ್ಗಟ್ಟು ತುಂಬಾ ಬಂದಿದೆ. ಕಾರಣ ಮತ್ತೇನಿಲ್ಲ. ಮನೆಯೊಳಗೂ ಹೊರಗೂ ಕ್ರಮಶಿಕ್ಷಣ ತಪ್ಪಿಹೋಯಿತು. ನಾನು ಮನೆಗೆ ಅಳಿಯನಾದರೂ ಆಸ್ತಿಗೆ ವಾರಸುದಾರನಲ್ಲ ನೋಡಿ. ಯಾರೂ ನನ್ನ ಮಾತನ್ನು ಕೇಳುವುದಿಲ್ಲ." ಎಂದನು. ರಂಗರಾಜನು ನೊಂದುಕೊಂಡು, "ಹಾಗಾದರೆ ಏನು ಮಾಡಬೇಕೆನ್ನುತ್ತೀ ?" ಎಂದು ಕೇಳಿದನು.

"ನಿಮಗೆ ನನ್ನ ಮೇಲೆ ನಂಬುಗೆ ಇದ್ದರೆ ನಿಮ್ಮ ದೊಡ್ಡ ಮಗನಿಗೆ ಸ್ವಲ್ಪ ವ್ಯವಹಾರಜ್ಞಾನ ಬರುವವರೆಗೆ, ಆಸ್ತಿಯನ್ನು ಕಾಪಾಡುವ ಸರ್ವಹಕ್ಕುಗಳನ್ನೂ ನನಗೇ ಕೊಟ್ಟಿರುವುದಾಗಿ ಪ್ರಕಟಿಸಿಬಿಡಿರಿ. ಮತ್ತೆ ನೋಡೋಣ" ಎಂದ ರಾಜಯ್ಯ.

ರೋಗಿಷ್ಠನಾಗಿ ಹಾಸಿಗೆ ಹಿಡಿದ ರಂಗರಾಜನು ಹಾಗೆಯೇ ಮನೆಯೊಳಗಿರುವವರನ್ನೂ, ನೌಕರರನ್ನೂ ಕರೆದು ರಾಜಯ್ಯ ಏನು ಹೇಳಿದರೂ ಅದು ತಾನು ಹೇಳಿದ್ದೆಂದೇ ತಿಳಿಯಬೇಕೆಂದು, ಅವನ ಮೇಲೆ ದೂರುತಂದರೆ ತಾನು ಕೇಳುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿಬಿಟ್ಟನು.



ಇಷ್ಟಾದ ಮೇಲೆ ರಾಜಯ್ಯನ ದರ್ಬಾರು ಜೋರಾಯಿತು. ಅವನು ಮೊದಲಿಗಿಂತಲೂ ಹೆಚ್ಚು ಚುರುಕಾಗಿ ಮಾವಯ್ಯನ ಸೊತ್ತನ್ನು ಕೊರೆದುಕೊಳ್ಳ ಹೊಡೆಯ ತೊಡಗಿದನು. ಎಲ್ಲರಿಗಿಂತ ಹೆಚ್ಚು ಪ್ರತಿಬಂಧಕನಾಗಿದ್ದ ಚಿಕ್ಕಳಿಯ ವೀರರಾಜನ ಮೇಲೆ, ಒಂದು ಕಳ್ಳತನದ ಆರೋಪವನ್ನು ಹೇಳಿ, ನ್ಯಾಯಾಧಿಕಾರಿಗಳಿಗೆ ಒಪ್ಪಿಸಿ ನಿರ್ಬಂಧದಲ್ಲಿಡಿಸಿಬಿಟ್ಟನು. ವ್ಯವಹಾರವು ಇಷ್ಟೊಂದು ವಿಪರೀತಕ್ಕಿಟ್ಟುಕೊಂಡಾಗ ರಂಗರಾಜನು ರಾಜಯ್ಯನನ್ನು ಆಕ್ಷೇಪಿಸಿ ಮಾತಾಡಲು ತೊಡಗಿದನು. ಮಾವಯ್ಯನಿಗೆ ಮತಿ ಚಲಿಸಿತೆಂದೂ ಹುಚ್ಚು ತಗಲಿತೆಂದೂ ರಾಜಯ್ಯ ಪ್ರಚಾರಮಾಡ ತೊಡಗಿ, ಮಾವಯ್ಯನನ್ನು ಕೋಣೆಯೊಳಗೆ ಬಂಧಿ

ಸಿಟ್ಟನು. ಈಗ ಅವನಿಗೆ ಯಾವ ಅಡ್ಡಿಯೂ ಇರಲಿಲ್ಲ. ಅವನೀಗ ಒಳ್ಳೆಯ ಧೈರ್ಯದಿಂತ ತನ್ನ ಊರಿನಲ್ಲಿ ಒಂದು ದೊಡ್ಡ ಮನೆಯನ್ನೂ ಕಟ್ಟತೊಡಗಿದ.

ಅಷ್ಟರಲ್ಲಿ ವೀರರಾಜನ ಮೇಲಿದ್ದ ಕಳ್ಳತನದ ಆರೋಪಣೆ ಸುಳ್ಳೆಂದು ರುಜುವಾಗಿ, ಅಧಿಕಾರಿಗಳು ಅವನನ್ನು ಬಿಟ್ಟುಬಿಟ್ಟರು. ಅವನು ಪರಿಸ್ಥಿತಿಯನ್ನು ತಿಳಿದು ನ್ಯಾಯಾಧಿಕಾರಿಗೆ ರಾಜಯ್ಯನ ದುಷ್ಟತನಗಳನ್ನು ಹೇಳಿದನು. ತನ್ನ ಮಾವಯ್ಯನಿಗೆ ಬುದ್ಧಿ ಕೆಟ್ಟು ಹೋಯಿತೆಂಬುದೂ ಸುಳ್ಳೆಂದು ವೈದ್ಯರ ಮೂಲಕ ಪರೀಕ್ಷೆ ನಡೆಯಿಸಿ ನಿರೂಪಿಸಿದನು. ಇದೆಲ್ಲಾ ನ್ಯಾಯಾಧಿಕಾರಿಗಳ ಸಮಕ್ಷಮದಲ್ಲಿಯೇ ನಡೆದುದರಿಂದ ರಾಜಯ್ಯ ನಿರುಪಾಯನಾದನು.

ಬಂಧನದಿಂದ ಹೊರಬಂದ ರಂಗರಾಜ, ಮತ್ತೆ ಯಜಮಾನಿಕೆಯ ಅಧಿಕಾರಕ್ಕೆ ಬಂದು, ದೊಡ್ಡ ಅಳಿಯನಿಗೆ ತಾನು ಕೊಟ್ಟ ಅಧಿಕಾರವನ್ನು ರದ್ದು ಮಾಡಿ, ಅದನ್ನು ಚಿಕ್ಕ ಅಳಿಯ ವೀರರಾಜನಿಗೆ ಒಪ್ಪಿಸಿದನು.

ಕೆಲವು ತಿಂಗಳು ಕಳೆಯಿತು. ವೀರರಾಜನು ರಾಜಯ್ಯನ ನಿಜ ಸ್ವರೂಪವನ್ನು ತೋರಿಸಿ ಕೊಟ್ಟನೇ ಹೊರತು, ಬೇರೆ ಯಾವ ಅಭಿವೃದ್ಧಿಯನ್ನೂ ಸಾಧಿಸಲಾರದೆ ಹೋದನು. ನೌಕರರೆಲ್ಲ ಸೋಮಾರಿಗಳಾಗಿದ್ದರು. ರಾಜಯ್ಯ ಕೆಲವು ನೌಕರರನ್ನು ಒಳಪಡಿಸಿಕೊಳ್ಳಲು ಅವರಿಗೆ ಸೋಮಾರಿತನವನ್ನು ಬರಿಸಿದ್ದನು. ಅದರಿಂದ ಇತರ ನೌಕರರಿಗೂ ಕೆಲಸದಲ್ಲಿರುವ ಶ್ರದ್ಧೆ ಹೊರಟು ಹೋಗಿತ್ತು. ತಮ್ಮ ಶ್ರಮ ಫಲಿತವನ್ನು ಕುರಿತು ಅಭಿಮಾನಿಸಿಕೊಳ್ಳುವುದನ್ನೂ ಎಲ್ಲ ನೌಕರರೂ ಮರೆತಿದ್ದರು. ಪಶು ಸಂಪದಗಳು ಅಸ್ತವ್ಯಸ್ತವಾಗಿದ್ದುವು. ಇದನ್ನೆಲ್ಲ ಸರಿಮಾಡಲು ವೀರರಾಜನಿಗೆ ಯಾಕೋ ಸಾಧ್ಯವಾಗಲೇ ಇಲ್ಲ.

ಕಡೆಗೆ ಅವನು ತನ್ನ ಅಶಕ್ತತೆಯನ್ನು ಕುರಿತು ಒಂದುಸಾರಿ ರಂಗರಾಜನೊಂದಿಗೆ ಮಾತಾಡಿದನು. ಅದನ್ನು ಕೇಳಿ ರಂಗರಾಜನು ನಕ್ಕು, "ರಾಜಯ್ಯ ದುಷ್ಟಬುದ್ಧಿಯವನಾದರೂ ಸಾಮರ್ಥ್ಯ ಉಳ್ಳವನು. ಅವನಲ್ಲಿದ್ದ ಸ್ವಾರ್ಥಬುದ್ಧಿ ಅವನ ಸಾಮರ್ಥ್ಯವನ್ನು ಹಾಳು ಕೆಲಸಕ್ಕೀಡು ಮಾಡಿತು. ನೀನು ಅವನ ತಪ್ಪುಗಳನ್ನು ಎಣಿಸಿಕೊಂಡಿರುವುದನ್ನುಬಿಟ್ಟು, ಖರ್ಚಿಗೆ ಸರಿ ತೂಗುವ ಆದಾಯ ಹೆಚ್ಚಾಗುವ ದಾರಿ ನೋಡು. ಕೋಪ ಭಾವನೆ ಬಿಟ್ಟರೆ ವಿವೇಕ ಸರಿಯಾದ ಮಾರ್ಗ ತೋರಿಸುತ್ತದೆ. ಹೊಸ ಅಳಿಯನಾದ ನಿನ್ನ ಬಾಧ್ಯತೆ ಅದೇ" ಎಂದನು.

ಆಮೇಲೆ ವೀರರಾಜನು ರಾಜಯ್ಯನ ಮೇಲಿನ ಕೋಪವನ್ನು ಮರೆತು, ರಂಗರಾಜನ ವ್ಯವಹಾರಗಳನ್ನು ಸಕ್ರಮವಾಗಿ ಎರಡು ವರ್ಷಗಳಲ್ಲಿ ಹಿಂದಿನ ಒಳ್ಳೆಯ ಸ್ಥಿತಿಗೇ ಒಯ್ದು ನಿಲ್ಲಿಸಿದನು.





# ನಾಣ್ಯಗಳ ಮಾಯೆ

ಒಂದು ಊರಿನಲ್ಲಿ ದಾಮೋದರಭಂಡಾರಿ ಎಂಬ ದೊಡ್ಡ ವರ್ತಕನಿದ್ದನು. ಅವನು ಸಾಸಿವೆಯಿಂದ ಹಿಡಿದು ಸಾವಿರಾರು ರೂಪಾಯಿ ಬೆಲೆಬಾಳುವ ರತ್ನಗಳವರೆಗೂ ಭಾರಿ ವ್ಯಾಪಾರ ಮಾಡಿ ಲಕ್ಷಗಟ್ಲೆ ಸಂಪಾದಿಸಿದ್ದ.

ಆ ಕಾಲದಲ್ಲಿ ದೇಶದ ಪರಿಸ್ಥಿತಿ ಬಹಳ ಘೋರ ರೂಪ ತಾಳಿತ್ತು. ಕುಡಿತ, ಜೂಜು, ಜುಗಾರಿ ಮೊದಲಾದ ಬೇಡದ ಕೃತ್ಯಗಳು ಯಾವ ಅಡೆ ತಡೆಯೂ ಇಲ್ಲದೆ ಸಾಗುತಿತ್ತು. ಸರಕಾರೀ ನಾಣ್ಯಗಳಿಗೆ ಸರಿದೂಗುವ ನಕಲೀನಾಣ್ಯಗಳು ತಯಾರಾಗುತ್ತಿವೆ ಎಂಬ ವದಂತಿಯೂ ಬಲವಾಗಿತ್ತು. ಈ ಮಾತು ದಾಮೋದರಭಂಡಾರಿಯನ್ನು ತುಂಬಾ ಆಕರ್ಷಿಸಿತು. ಅಸಲು ನಾಣ್ಯಗಳನ್ನು ತೆಗೆದುಕೊಂಡು ಅದರ ಎರಡು ಪಾಲು ನಕಲೀನಾಣ್ಯ ಕೊಡುವವರು ಇದ್ದಾರೆಂದು ಅನೇಕರು ಹೇಳುವುದನ್ನು ಕೇಳಿದನು. ಅಂತಹ ಅವಕಾಶ ಸಿಕ್ಕಿದರೆ ತನ್ನ ಹತ್ತಿರವಿರುವ ಕೆಲವು ಲಕ್ಷಗಳನ್ನು ಎರಡು ಮೂರು ಪಾಲು ಹೆಚ್ಚಿಸಿಕೊಳ್ಳಬಹುದು. ಆದರ ವಿನಿಯೋಗಸ್ಥರು ಯಾರೆಂದು ಗುಟ್ಟಾಗಿ ವಿಚಾರಿಸಿಕೊಂಡಿದ್ದನು.

ಒಂದು ದಿನ ಅವನು ಅಂಗಡಿ ಬೀದಿಯಲ್ಲಿ ಏನೋ ಕೆಲಸದ ಮೇಲೆ ಹೋಗುತ್ತಿದ್ದಾಗ ಯಾವನೋ ಒಬ್ಬ ದೊಡ್ಡಮನುಷ್ಯ ಭಿಕ್ಷುಕನೊಬ್ಬನಿಗೆ ಜೇಬಿನಿಂದ ಒಂದು ಮುಷ್ಟಿ ಬೆಳ್ಳಿನಾಣ್ಯಗಳನ್ನು ತೆಗೆದುಕೊಡುವ ದೃಶ್ಯ ಕಾಣಿಸಿತು. ಅದನ್ನು ನೋಡಿ ದಾಮೋದರನ ಎದೆ ತೀವ್ರವಾಗಿ ಹೊಡೆದುಕೊಂಡಿತು. ಭಿಕ್ಷುಕ ಆಕಡೆಗೆ ಹೊರಟುಹೋದ ಮೇಲೆ ದಾಮೋದರನು ಆ ದೊಡ್ಡಮನುಷ್ಯನ ಬಳಿಗೆ ಹೋಗಿ "ನಮಸ್ಕಾರ, ಒಂದು ಮಾತು—" ಎಂದು ತನ್ನ ಹೆಸರು ಹೇಳಿ, "ತಾವು ಯಾರೋ, ಭಿಕ್ಷುಕನಿಗೆ ಮುಷ್ಟಿನಾಣ್ಯ ದಾನ ಮಾಡುವುದನ್ನು ನೋಡಿದೆ" ಎಂದು ಮಾತಾಡಿಸಿದನು.

"ಅಷ್ಟೇನಾ ? ನನ್ನ ಹೆಸರು ವರ್ಧಮಾನ. ನೀವೂ ಭಿಕ್ಷೆ ಕೇಳುವಿರೇನು ? ನಿಮ್ಮ ಸ್ಥಾನಕ್ಕೆ ತಕ್ಕ ಹಾಗೆ ಬುಟ್ಟಿ ತುಂಬಾ ನಾಣ್ಯಗಳನ್ನು ಬೇಕಾದರೂ ಕೊಡಬಲ್ಲೆ" ಎಂದ ಆ ದೊಡ್ಡಮನುಷ್ಯ ನಗುತ್ತ.

"ಅದು ಹೇಗೆ ಕೊಡುವಿರಿ ? ನನಗೊಂದೂ ಅರ್ಥವಾಗುವುದಿಲ್ಲ" ಎಂದ ದಾಮೋದರಭಂಡಾರಿ.

"ಅವೆಲ್ಲಾ ನಿಜವಾದ ನಾಣ್ಯಗಳಾದರೆ ಅರ್ಥ

ವಿ. ಎಸ್. ನಾರಾಯಣ



ವಾಗಲಿಕ್ಕಿಲ್ಲ. ಅವು ನಕಲೀನಾಣ್ಯಗಳು. ಕಡಮೆ ತರಗತಿಯ ಲೋಹಕ್ಕೆ ಬೆಳ್ಳಿಯ ದ್ರವ ಹಚ್ಚಿ ಮಾಡಿದಂಥವು. ಯಾರಿಗೆ ಎಷ್ಟೆಷ್ಟು ಚಲಾವಣೆ ಮಾಡಲು ಸಾಧ್ಯವೋ ಅಷ್ಟಷ್ಟೂ ಕೊಡಬಲ್ಲೆ. ವ್ಯತಾಸ ಕಂಡು ಹಿಡಿಯಲು ಯಾವ ಬ್ರಹ್ಮನಿಗೂ ಸಾಧ್ಯವಿಲ್ಲ" ಎಂದು ಹೇಳಿ ವರ್ಧಮಾನನು ಒಂದು ಮುಷ್ಟಿ ನಾಣ್ಯಗಳನ್ನು ದಾಮೋದರಭಂಡಾರಿಗೆ ಕೊಟ್ಟು, "ಬೇಕಾದರೆ ನೀವೇ ಚಲಾಯಿಸಿ ನೋಡಿರಿ. ನಿಮ್ಮ ಜತೆಯಲ್ಲೇ ನಾನೂ ಇರುತ್ತೇನೆ" ಎಂದನು.

ದಾಮೋದರಭಂಡಾರಿ ಹೆದರುತ್ತಲೇ ಆ ನಾಣ್ಯಗಳನ್ನು ಪಡೆದುಕೊಂಡು, ಅವನ ಜತೆಯಲ್ಲಿ ಜವುಳೀ ಅಂಗಡಿಗೆ ಹೋಗಿ ಬಟ್ಟೆಯನ್ನು ಕೊಂಡುಕೊಂಡು ಆ ನಾಣ್ಯಗಳನ್ನೇ ಕೊಟ್ಟನು. ಅಂಗಡಿಯವನು ಏನೂ ಹೇಳದೆ ಅವುಗಳನ್ನು ತೆಗೆದುಕೊಂಡನು. ನಕಲೀನಾಣ್ಯಗಳು ಅತಿಸುಲಭದಲ್ಲಿ ಚಲಾವಣೆಯಾಗುವುದನ್ನು ನೋಡಿ, ದಾಮೋದರನಿಗೆ ಸಂತೋಷದಿಂದ ತೇಲಿ ಹೋಗುವಂತಾಯಿತು. ಜವುಳಿ ಅಂಗಡಿಯಿಂದ ಹೊರಗೆ ಬಂದ ಮೇಲೆ ವರ್ಧಮಾನನು ದಾಮೋದರನ ಭುಜವನ್ನು ತಟ್ಟಿ, "ಈಗ ನಿಮಗೆ ಧೈರ್ಯ ಬಂದಿರಬೇಕು. ಇನ್ನೂ ಚಲಾವಣೆ ಮಾಡುವಿರಾ?" ಎಂದು ಕೇಳಿದನು.

ಆಗಲೆಂಬಂತೆ ದಾಮೋದರನು ತಲೆಯೊಲಿದನು. ಅವನು ನೂರು ಅಸಲು ನಾಣ್ಯಗಳನ್ನು ಕೊಟ್ಟರೆ, ಇನ್ನೂರು ನಕಲೀನಾಣ್ಯಗಳನ್ನು ಕೊಡುವುದಾಗಿ ವರ್ಧಮಾನನು ಹೇಳಿದನು. ತನ್ನ ಮನೆಯಿರುವ ಸ್ಥಳವನ್ನೂ, ಅಲ್ಲಿಗೆ ಬರಬೇಕಾದ ವೇಳೆಯನ್ನೂ ವರ್ಧಮಾನನು ತಿಳಿಸಿದನು.

ಅದರಂತೆ ದಾಮೋದರಭಂಡಾರಿ ಹಣ ತೆಗೆದುಕೊಂಡು ವರ್ಧಮಾನನ ಮನೆಗೆ ಹೋದನು. ವರ್ಧಮಾನನು ದಾಮೋದರನು ಕೊಟ್ಟ ನಾಣ್ಯಗಳನ್ನು ನಿರ್ಲಕ್ಷ್ಯವಾಗಿ ಒಂದು ಬುಟ್ಟಿಯೊಳಗೆ ಬಿಸುಟಂತೆ ಸುರಿದು, ಮಂಚದ ಕೆಳಗಿನಿಂದ ಒಂದು ಪೆಟ್ಟಿಗೆಯನ್ನು ಮುಂದಕ್ಕೆ ಎಳೆದು, ಅದರೊಳಗಿನಿಂದ ಬೊಗಸೆ ತುಂಬ ನಾಣ್ಯಗಳನ್ನು ತೆಗೆದು ದಾಮೋದರನ ಮುಂದೆ ಹಾಕಿ, "ಎಣಿಸಿಕೊಳ್ಳಿ. ನಾಲ್ಕು ಹೆಚ್ಚಿಗೇ ಇರುತ್ತವೆ" ಎಂದನು.

ದಾಮೋದರನು ಲೆಕ್ಕಮಾಡಲು, ಇಪ್ಪತ್ತು ನಾಣ್ಯಗಳು ಹೆಚ್ಚೇ ಇದ್ದುವು. ಆ ನಾಣ್ಯಗಳನ್ನು ಚಲಾವಣೆ ಮಾಡುವುದೇನೂ ಕಷ್ಟವಲ್ಲವೆಂದೇ ತೋರಿತು. ಎಲ್ಲವೂ ನಿಜ ನಾಣ್ಯಗಳಂತೆಯೇ ಇದ್ದುವು. ಹೀಗೆ ಕಳ್ಳನಾಣ್ಯಗಳಿಂದ ಅವನ ವ್ಯಾಪಾರವೂ ಹೆಚ್ಚತೊಡಗಿತು.

ಒಂದು ದಿನ ದಾಮೋದರಭಂಡಾರಿ ತನ್ನ ಹತ್ತಿರವಿದ್ದ ಹತ್ತು ಲಕ್ಷ ನಾಣ್ಯಗಳನ್ನು ಚೀಲಗಳಲ್ಲಿ ತುಂಬಿಸಿ, ಗಾಡಿಯಲ್ಲಿ ಹಾಕಿ, ವರ್ಧಮಾನನ ಮನೆಗೆ ಸಾಗಿಸಿಕೊಂಡುಹೋದನು. "ಈ ಸಾರಿ ದೊಡ್ಡದಾಗಿ ತಂದಿರಾ? ಇಷ್ಟೊಂದು ಹಣವನ್ನು ನನ್ನ ಕೈಯಿಂದ

ಚಲಾವಣೆ ಮಾಡುವುದು ಭಾವ್ಯವೆನಿಸದು. ಇಂಥಾ ದ್ದಕ್ಕೆ ನನ್ನ ಗುರುಗಳೇ ತಕ್ಕವರು. ಅವರಬಳಿಗೆ ಹೋಗೋಣ ನಡೆಯಿರಿ" ಎಂದ ವರ್ಧಮಾನ.

ನಾಣ್ಯಗಳ ಚೀಲಗಳನ್ನು ಎರಡೆತ್ತಿನ ಗಾಡಿಯಲ್ಲಿ ಹಾಕಿ, ಇಬ್ಬರೂ ಹೊರಟರು. ಹಾಗೆ ಎರಡು ದಿನ ಪ್ರಯಾಣ ಮಾಡಿ ಆ ಗುರುವಿನ ಊರನ್ನು ತಲಪಿದರು. ಅಲ್ಲಿ ಬಹು ಸುಲಭವಾಗಿ ದಾಮೋದರ ಭಂಡಾರಿಯ ಕೆಲಸ ಮುಗಿಯಿತು.

ಇಪ್ಪತ್ತು ಲಕ್ಷ ಕಳ್ಳ ನಾಣ್ಯಗಳಿರುವ ಚೀಲಗಳನ್ನು ಎರಡು ಗಾಡಿಗಳಲ್ಲಿ ಹಾಕಿಕೊಂಡು ವರ್ಧಮಾನನು ಕಳುಹಿಸಿದ ರಕ್ಷಕರಾದ ನಾಲ್ವರು ಜತೆಗಾರರೊಂದಿಗೆ ದಾಮೋದರಭಂಡಾರಿ ತನ್ನ ಊರಿಗೆ ಹಿಂದಿರುಗಿದನು. ವರ್ಧಮಾನನು ಮಾತ್ರ ಕೆಲಸವಿರುವುದೆಂದು ಹೇಳಿ ಗುರುಗಳ ಸನ್ನಿಧಾನದಲ್ಲೇ ಉಳಿದನು.

ಹೀಗೆ ತಿರುಗು ಪ್ರಯಾಣ ಮಾಡುತ್ತಿದ್ದಾಗ, ದೂರದಲ್ಲಿ ರಾಜಭಟರು ಈ ಕಡೆಗೇ ಬರುತ್ತಿರುವು ದನ್ನು ರಕ್ಷಕರು ಗಮನಿಸಿ ದಾಮೋದರನೊಂದಿಗೆ, "ರಾಜಭಟರು ಬರುತ್ತಿದ್ದಾರೆ. ಯಾವುದಕ್ಕೂ ಒಳ್ಳೆಯದು. ನಾವು ಗಾಡಿಗಳನ್ನು ಒಂದು ಬದಿಯಲ್ಲಿ ನಿಲ್ಲಿಸಿ, ಅವು ನಮ್ಮದಲ್ಲವೆಂಬಂತೆ ನಟಿಸೋಣ. ಅವರು ದಾಟಿಹೋದ ಮೇಲೆ ಮುಂದೆ ಪ್ರಯಾಣ ಮಾಡುವಾ" ಅಂದರು.

ಮೊದಲೇ ಹೆದರಿಕೊಂಡಿದ್ದ ದಾಮೋದರನು ಅವರು ಹೇಳಿದಂತೆಯೇ ಮಾಡಿದನು. ರಾಜಭಟರು ಬಂದು ಎರಡು ಗಾಡಿಗಳನ್ನು ನೋಡಿ ನಿಂತು, ನಾಣ್ಯಗಳ ಚೀಲಗಳನ್ನು ತಡವಿ ತಡವಿ ನೋಡಿ, "ಇವು ಯಾರವು?" ಎಂದು ದಾಮೋದರನನ್ನೂ, ರಕ್ಷಕರನ್ನೂ ನೋಡಿ ಕೇಳಿದರು.

"ನಮಗೇನು ಗೊತ್ತು? ನಾವು ಕೂಲೀ ಕೆಲಸ ಕ್ಕಾಗಿ ಹೊಲಗಳನ್ನು ಹುಡುಕುತ್ತಾ ಇರುವಾಗ, ಈ ಮಹಾರಾಜರು ತಮ್ಮ ಹೊಲಗಳನ್ನು ಉಳಬೇಕೆಂದು ನಮ್ಮನ್ನು ಕರೆದುಕೊಂಡು ಹೋಗುತ್ತಿದ್ದಾರೆ. ಗಾಡೀಗೀಡೀ ನಾವರಿಯೆವು" ಎಂದರು ರಕ್ಷಕರು. ಹೌದೆಂಬಂತೆ ದಾಮೋದರನೂ ತಲೆಯಾಡಿಸಿದ.



ರಾಜಭಟರು ಆ ಗಾಡಿಗಳನ್ನು ಸೀದಾ ರಾಜಧಾನಿಯ ಕಡೆಗೆ ಹೊಡೆದುಕೊಂಡು ಹೋಗಿಬಿಟ್ಟರು.

ಅದನ್ನು ನೋಡುತ್ತಾ ತಾನು ಪಾತಾಳಕ್ಕಿಳಿಯುವೆನೆಂದು ದಾಮೋದರಭಂಡಾರಿಯ ಎದೆ ಜಾರಿ ಹೋಯಿತು. ರಕ್ಷಕರು ಈ ಸಂಗತಿಯನ್ನು ಯಜಮಾನರೊಂದಿಗೆ ಹೇಳುವೆವೆಂದು ಬೇಗಬೇಗನೆ ಹೋಗಿಬಿಟ್ಟರು. ದಾಮೋದರಭಂಡಾರಿ ಏನೂ ತೋರದೆ ತಲೇ ಮೇಲೆ ಕೈಹೊತ್ತು ಮನೆಗೆ ಹಿಂದಿರುಗಿ ಒಂದು ತಿಂಗಳವರೆಗೆ ಹಾಸಿಗೆ ಹಿಡಿದನು. ಅವನಿಗೆ ಇದ್ದುದೆಲ್ಲಾ ಹೋಗಿಬಿಟ್ಟಿತ್ತು. ಒಂದು ತಿಂಗಳ ಮೇಲೆ ತುಂಬ ಕೃಶನಾಗಿ ಹೋದ ದಾಮೋದರಭಂಡಾರಿ ಬೀದಿಯಲ್ಲಿ ತಿರುಗಾಡ ತೊಡಗಿದನು. ಆಗ ಒಂದು ದಿನ ದೂರದಲ್ಲಿ ವರ್ಧಮಾನನನ್ನು ನೋಡಿದನು. ತನ್ನ ಹಾಗೆ ಅವನೇನೂ ಹಾಳಾಗಿರಲಿಲ್ಲ.

ಯಾವನೋ ಒಬ್ಬ ಭಿಕ್ಷುಕ ಕುಂಟುತ್ತಾ ಬಂದು ವರ್ಧಮಾನನ ಮುಂದೆ ಕೈ ನೀಡಿದ. ವರ್ಧಮಾನನು ಅವನಿಗೆ ಒಂದು ಮುಷ್ಟಿ ನಾಣ್ಯ ಹಾಕಿ ಕಳಿಸಿಬಿಟ್ಟ. ಭಿಕ್ಷುಕ ಸ್ವಲ್ಪ ದೂರದವರೆಗೆ ಕುಂಟುತ್ತಾ ಆಮೇಲೆ ಸರಿಯಾಗಿಯೇ ನಡೆಯುತ್ತಿದ್ದ. ದಾಮೋದರನಿಗೆ ಆ ಭಿಕ್ಷುಕನ ಗುರುತೂ ಹತ್ತಿತು. ಮೊತ್ತಮೊದಲು ಯಾವ ಭಿಕ್ಷುಕ ವರ್ಧಮಾನನ ಕೈಯಿಂದ ನಾಣ್ಯ ಪಡೆದನೋ ಅದೇ ಭಿಕ್ಷಕ ಇವನೂ. ಅವನು ವರ್ಧಮಾನನ ಕಡೆಯವನೇ! ತನ್ನನ್ನು ಹಿಡಿಯಲು ಅವನೊಂದು ಎರೆ!

ವರ್ಧಮಾನನು ಆ ಭಿಕ್ಷುಕನ ಹಿಂದೆಯೇ ಹೋಗಿ, ತಾನು ಅವನಿಗೆ ಕೊಟ್ಟ ನಾಣ್ಯಗಳನ್ನು ವಾಪಾಸು ತೆಗೆದುಕೊಂಡನು. ವರ್ಧಮಾನನು ಹೊರಟು ಹೋದ ಮೇಲೆ ದಾಮೋದರನು ಆ ಭಿಕ್ಷುಕನನ್ನು ಸಂಧಿಸಿ ಮಾತಾಡಿಸಿದನು. ಆಗ ತನ್ನೊಂದಿಗೆ ರಕ್ಷಕರಾಗಿ ಬಂದ ನಾಲ್ಕು ಮಂದಿಗಳೂ, ರಾಜಭಟರೂ ಎಲ್ಲಾ ವರ್ಧಮಾನನ ಕಡೆಯವರೇ ಎಂಬ ಗುಟ್ಟೂ ಗೊತ್ತಾಯಿತು. ಭಿಕ್ಷುಕ ನಟನೆಯವನು ದಾಮೋದರನೊಂದಿಗೆ "ಈ ವಿಷಯವನ್ನು ನೀವು ಯಾರ ಮುಂದಾದರೂ ಹೇಳಿದರೆ ನಿಮ್ಮ ಇತಿಶ್ರೀ ಯಾಗಿಬಿಟ್ಟೀತು. ನಾವು ಎಂತಹ ಕಾರ್ಯಕ್ಕೂ ಹೇಸುವವರಲ್ಲ!" ಎಂದು ಎಚ್ಚರಿಸಿದನು. "ನನ್ನ ಗತಿ ಏನು? ನನ್ನ ಹೆಂಡತಿ ಮಕ್ಕಳ ಗತಿ ಹೇಗೆ?" ಎಂದು ಗೋಗರೆದ ದಾಮೋದರ. "ಸ್ವಲ್ಪ ಹಣ ಸಾಲ ಕೊಡುತ್ತೇನೆ. ಏನಾದರೂ ಸಣ್ಣ ವ್ಯಾಪಾರ ಮಾಡಿ" ಎಂದ ಆ ದಯಾಮಯ "ಭಿಕ್ಷುಕ".

"ಅಸಲು ನಾಣ್ಯಗಳೋ ನಕಲೀಯೋ?" ಎಂದು ದಾಮೋದರ ಕೇಳಲು, "ಆ ಪ್ರಶ್ನೆ ಬೇಡ. ಎಲ್ಲಾ ಅಸಲು ನಾಣ್ಯಗಳೇ" ಎಂದ "ಭಿಕ್ಷುಕ" ನಗುತ್ತಾ.



# ಧಾನ್ಯದ ಮಹತ್ತು

ಒಂದು ಊರಿನಲ್ಲಿ ಶಿವಯ್ಯನೆಂಬ ಆಸ್ತಿವಂತನಿದ್ದ. ಅವನು ದೊಡ್ಡ ಆಸ್ತಿವಂತನಾಗಿದ್ದುದಕ್ಕೆ ಸರಿಯಾಗಿ, ಮಹಾ ನಗರಗಳಲ್ಲಿರತಕ್ಕಂತಹ ಭಾರಿ ಮನೆಯನ್ನು ತನ್ನ ಊರಿನಲ್ಲಿ ಕಟ್ಟಿಸಿದನು. ಅದನ್ನು ನೋಡಲು ಸುತ್ತುಮುತ್ತಲಿನ ಗ್ರಾಮಗಳಿಂದ ಜನರು ಬರುತ್ತಿದ್ದರು.

ಅವನು ತನ್ನ ಹೊಲಗಳಿಂದ ಬಂದ ಧಾನ್ಯಗಳನ್ನು ದೊಡ್ಡದೊಂದು ಕಣಜದ ಕೋಣೆಯಲ್ಲಿ ರಾಶಿ ಹಾಕಿಸಿ, ಕೆಲಸಗಾರರಿಗೂ, ಬಡಬಗ್ಗರಿಗೂ ತಾನೇ ಧಾನ್ಯವನ್ನು ಅಳೆದುಕೊಟ್ಟು, ಆಮೇಲೆ ಭದ್ರವಾಗಿ ಬೀಗ ಹಾಕುವನು.

ಒಂದು ದಿನ ಪಕ್ಕದ ಗ್ರಾಮದಿಂದ ಮೂವರು ಮನುಷ್ಯರು ಶಿವಯ್ಯನ ಭವನವನ್ನು ನೋಡಲು ಬಂದರು. ಆಗ ಶಿವಯ್ಯ ಕೂಲಿಗಳಿಗೂ, ಬಡಬಗ್ಗರಿಗೂ ಧಾನ್ಯ ಅಳೆದು ಕೊಡುವುದನ್ನು ಮುಗಿಸಿ ಕೆಳಗೆ ಬಿದ್ದ ಧಾನ್ಯಗಳನ್ನು ಒಂದೊಂದಾಗಿ ಹೆಕ್ಕಿ ಕಣಜದೊಳಗೆ ಹಾಕುತ್ತಾ ಇದ್ದ.

ಅದನ್ನು ನೋಡಿ ಮೂವರಲ್ಲೊಬ್ಬ "ಇದೇನ್ರೀ, ಧಾನ್ಯವನ್ನು ಚಿನ್ನದ ಕಾಳಿನ ಹಾಗೆ ಹೆಕ್ಕುತ್ತಾ ಇದ್ದೀರಲ್ಲ!" ಎಂದನು ಎಗತಾಳಿಯಾಗಿ.

ಶಿವಯ್ಯ ಆ ಮೂವರನ್ನೂ ಆ ದಿನ ತನ್ನ ಮನೆಯಲ್ಲಿ ಊಟಕ್ಕಿರಲು ಹೇಳಿ, ಬಗೆಬಗೆಯ ತಿಂಡಿಗಳಿಂದ ಹಬ್ಬದ ಅಡಿಗೆ ಮಾಡಿಸಿದನು. ಅವುಗಳ ವಾಸನೆಗೇ ಬಂದವರಿಗೆ ಜೊಲ್ಲು ಒಸರಿತು. ಶಿವಯ್ಯ ಅವರನ್ನು ಊಟಕ್ಕೆ ಕೂಡಿಸಿದನು. ಅಡಿಗೆಯವಳು ಆ ಮೂವರ ಎಲೆಯಲ್ಲಿ ಚಿನ್ನದ ಹಲ್ಲೆಗಳನ್ನು ಬಡಿಸಿದಳು.

"ಧಾನ್ಯಕ್ಕಿಂತಲೂ ಮಹತ್ವಾದ ಈ ಚಿನ್ನವನ್ನು ಆರೋಗಣೆ ಮಾಡಿರಿ!" ಎಂದು ಶಿವಯ್ಯ ಅವರನ್ನು ಕೇಳಿಕೊಂಡನು. ಆಗ ಅವರು ತಮ್ಮ ತಪ್ಪನ್ನು ತಿಳಿದು ಕ್ಷಮಾಪಣೆ ಹೇಳಿಕೊಂಡು, ಆಮೇಲೆ ಔತಣವನ್ನು ಉಂಡು ಹೊರಟುಹೋದರು.





# ತಪ್ಪಿಗೆ ತಕ್ಕ ಶಿಕ್ಷೆ

ಹಿಂದೆ ಒಂದು ಕಾಲದಲ್ಲಿ ಕಾಶೀ ಪಟ್ಟಣದಲ್ಲಿ ಕಮಲಶ್ರೇಷ್ಠಿ ಎಂಬ ಧನಿಕನಾದ ವರ್ತಕನಿದ್ದನು. ಅವನಿಗೆ ಅತ್ಯಂತ ಸುಂದರಿಯಾದ, ಹೆಸರಿಗೆ ತಕ್ಕಂತೆ ಪದ್ಮಿನಿ ಎಂಬ ಮಗಳಿದ್ದಳು. ಸೌಂದರ್ಯ ಮಾತ್ರವಲ್ಲದೆ ಒಳ್ಳೆಯ ಗುಣಗಳೂ ಅವಳಲ್ಲಿರುವುದಾಗಿ ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಅಂತಹ ಮಗಳಿಗಾಗಿ ತಕ್ಕ ವರನನ್ನು ತುಂಬಾ ಕಷ್ಟಪಟ್ಟು ಹುಡುಕಿದನು ಕಮಲಶ್ರೇಷ್ಠಿ. ಕಡೆಗೆ ಅವಳ ತಂದೆ ಚಂದ್ರನೆಂಬವನನ್ನು ಆರಿಸಿ ಅವಳಿಗೆ ಮದುವೆ ಮಾಡಿ ಅಳಿಯನನ್ನು ಮನೆಯಲ್ಲೇ ಇಟ್ಟುಕೊಂಡು, ತನ್ನ ವರ್ತಕ ವ್ಯವಹಾರವನ್ನು ಅವನಿಗೇ ವಹಿಸಿಕೊಟ್ಟನು.

ಪದ್ಮಿನಿಗೆ ಮಾತ್ರ ಚಂದ್ರನ ಮೇಲೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಎಲ್ಲರ ಎದುರಿನಲ್ಲಿ ತಾನು ಮಹಾಗುಣವತಿಯಾಗಿಯೂ, ಪತಿವ್ರತೆಯಾಗಿಯೂ ಇರುವಂತೆ ನಟಿಸುತ್ತಾ, ಒಳ್ಳೆಯ ರೀತಿಯಲ್ಲಿಯೇ ಇರುತ್ತಿದ್ದಳು. ಸ್ವಲ್ಪ ಕಾಲದ ಮೇಲೆ ಅವಳಿಗೆ ಒಬ್ಬ ಮಗನೂ ಹುಟ್ಟಿದ. ಆದರೆ ಅವಳು ಆ ಮಗನನ್ನು ಮುಟ್ಟಲಿಕ್ಕೂ ನಿರಾಕರಿಸಿಬಿಟ್ಟಳು. "ಮಗನಾದರೂ ಪರಪುರುಷತಾನೇ !" ಎನ್ನುತ್ತಿದ್ದಳು ಆ ಪತಿವ್ರತೆ.

ಒಂದು ದಿನ ಚಂದ್ರನು ತನ್ನ ಅಂಗಡಿಯಲ್ಲಿ ಕುಳಿತುಕೊಂಡಿರುವಾಗ ದಾರಿಯಲ್ಲಿ ಹೋಗುತ್ತಿದ್ದ ಸ್ಫುರದ್ರೂಪಿಯಾದ ಒಬ್ಬ ಬ್ರಾಹ್ಮಣ ಯುವಕನು, ದಾರಿಯುದ್ದಕ್ಕೂ ಪವಿತ್ರೋದಕ ಚೆಲ್ಲುತ್ತಾ,' ನಡೆಯುವುದನ್ನು ನೋಡಿದನು. ಅವನು ಮಹಾ ಉತ್ತಮನೆಂದು ಕಾಣುತ್ತಿತ್ತು.

ಆ ಸಮಯದಲ್ಲಿ ಚಂದ್ರನು ಯಾರಿಗೋ ಗೋದಿಯನ್ನು ಅಳೆದು ಕೊಡುತ್ತಿದ್ದನು. ಆ ಗೋದಿಯಿಂದೊಂದು ಒಣಹೊಟ್ಟು ಗಾಳಿಗೆ ಹಾರಿ ಹೋಗಿ, ಆ ಬ್ರಾಹ್ಮಣ ಯುವಕನ ತಲೆಯ ಜುಟ್ಟಿನ ಗಂಟಿನೆಡೆಯಲ್ಲಿ ಸಿಕ್ಕಿಕೊಂಡಿತು. ಅದನ್ನು ನೋಡಿ ಚಂದ್ರನು ನೊಂದುಕೊಳ್ಳುತ್ತಾ ಎದ್ದು ಹೋಗಿ ಅದನ್ನು ತೆಗೆಯಲು ನೋಡಿದನು.

ಆದರೆ ಆ ಬ್ರಾಹ್ಮಣ ಯುವಕನು ಅವನನ್ನು ತಡೆದು, "ನಿಲ್ಲು! ನನ್ನ ಶಿರವನ್ನು ಕಡಿದುಬಿಡುತ್ತೇನೆ. ನಾನು ಇಷ್ಟರವರೆಗೂ ಯಾವ ಪಾಪವನ್ನೂ ಮಾಡಿರಲಿಲ್ಲ. ಈಗ ನನ್ನಿಂದ ಏನೋ ಪಾಪ ನಡೆದಿದೆ. ಅದಕ್ಕೇ ಹೀಗಾಯಿತು, ಆದುದರಿಂದ ನನ್ನ ತಲೆಯನ್ನು ಖಂಡಿಸಿಕೊಳ್ಳಬೇಕಾದ್ದೇ ಸರಿ!" ಎಂದನು,

"ಸಾಹಿತೀಪ್ರಿಯ"

"ಅಯ್ಯೋ, ಹಾಗೆಲ್ಲ ಮಾಡಿ ನನ್ನನ್ನು ಪಾಪ ಕೂಪದಲ್ಲಿ ದೂಡಬಾರದು" ಎಂದು ಚಂದ್ರನು ತುಂಬಾ ಹೇಳಿಕೊಂಡ ಮೇಲೆ ಅವನು ತನ್ನ ತಲೆ ಕಡಿದುಕೊಳ್ಳುವ ಆಲೋಚನೆಯನ್ನು ಬಿಟ್ಟನು. ಚಂದ್ರನಿಗೆ ಆ ಯುವಕನ ಮೇಲೆ ಎಷ್ಟೋ ಭಕ್ತಿಯೂ ಗೌರವವೂ ಉಂಟಾಯಿತು. ಅವನು ಆ ಯುವಕ ನನ್ನು ಸ್ವಲ್ಪಕಾಲ ತನ್ನ ಮನೆಯಲ್ಲಿದ್ದು ತಮ್ಮನ್ನೆಲ್ಲ ಪಾವನ ಮಾಡಬೇಕೆಂದು ಬೇಡಿಕೊಂಡನು.

ಹೀಗೆ ಆ ಬ್ರಾಹ್ಮಣ ಯುವಕನು ಚಂದ್ರನ ಮನೆ ಯಲ್ಲಿ ತುಂಬಾ ಉಪಚರಿಸಲ್ಪಟ್ಟುಕೊಂಡಿರುವಾಗ, ಚಂದ್ರನಿಗೊಂದು ಆಲೋಚನೆ ಬಂತು. ತನ್ನಲ್ಲಿ ಯೌವನದ ಶಕ್ತಿಗಳಿರುವಾಗಲೇ ದೊಡ್ಡ ರೀತಿಯಲ್ಲಿ ವ್ಯಾಪಾರ ಮಾಡಿ ಸಂಪಾದಿಸ ತಕ್ಕುದನ್ನೆಲ್ಲಾ ಸಂಪಾ ದಿಸಿಬಿಡಬೇಕು ಎಂದುಕೊಂಡು, ತನ್ನ ಮನೆಯ ಎಲ್ಲಾ ಭಾರವನ್ನೂ ಆ ಬ್ರಾಹ್ಮಣ ಯುವಕನ ಮೇಲೆ ಬಿಟ್ಟು, ಹೊರಟನು. ಅವನು ಭಾರೀ ಭಾರೀ ವ್ಯಾಪಾರದ ಉದ್ದೇಶವನ್ನಿಟ್ಟುಕೊಂಡು ಅಲ್ಲಲ್ಲಿ ಮಜಲು ಮಾಡುತ್ತಾ, ಮಹಾನಗರವಾದ ಪಾಟಲೀ ಪುತ್ರಕ್ಕೆ ಪ್ರಯಾಣ ಮಾಡಿಕೊಂಡಿದ್ದನು.

ಅವನು ಪಾಟಲೀಪುತ್ರವನ್ನು ತಲಪಲು ಇನ್ನು ಒಂದು ಮಜಲು ಬಾಕಿ ಇತ್ತು. ಒಂದು ವನದಲ್ಲಿ ಆ ಕೊನೆಯ ಮಜಲನ್ನು ಹಾಕಿದನು. ಅಲ್ಲಿದ್ದ ಒಂದು ಮರದ ಮೇಲೆ ಒಂದು ಪಕ್ಷಿ ಸ್ವಲ್ಪವೂ ಕದಲದೆ ಬೊಂಬೆಯ ಹಾಗೆ ಕುಳಿತುಕೊಂಡಿತ್ತು. ಇನ್ನೂ ಆ ಮರದಲ್ಲಿದ್ದ ಬೇರೆಬೇರೆ ಪಕ್ಷಿಗಳು ಆಹಾರಕ್ಕಾಗಿ ಹಾರಿಹೋದ ಕೂಡಲೇ ಬೊಂಬೆಯ ಹಾಗಿದ್ದ ಪಕ್ಷಿ ಥಕ್ಕನೆ ಹಾರಿ ಬೇರೆ ಗೂಡುಗಳಲ್ಲಿದ್ದ ಮೊಟ್ಟೆಗಳನ್ನು ತಿಂದು ಮತ್ತೆ ಮರದಕೊಂಬೆಯ ಮೇಲೆ ನಿಶ್ಚಲ ವಾಗಿ ಕುಳಿತುಕೊಂಡಿತು. "ಇದೆಂಥ ದುಷ್ಟ ಪಕ್ಷಿ!" ಎಂದುಕೊಂಡನು ಚಂದ್ರ.

ಅಷ್ಟರಲ್ಲಿ ಒಬ್ಬ ಬೇಡನು ಹೊಂಚಿ ಗುರಿಯಿಟ್ಟು ಹೊಡೆದ ಬಾಣವು ಆ ಪಕ್ಷಿಗೆ ತಾಗಿತು. ಅದು ಬೊತ್ತನೆ ಕೆಳಗೆ ಬಿದ್ದು ಸತ್ತಿತು. ಇದನ್ನು ನೋಡಿ ವಿಕಲ ಮನಸ್ಕನಾದ ಚಂದ್ರನು, ಸ್ವಲ್ಪ ದೂರದಲ್ಲಿ



ಒಂದು ಆಶ್ರಮವಿರುವುದನ್ನು ನೋಡಿ ಅಲ್ಲಿಗೆ ಹೋದನು. ಅಲ್ಲಿ ಒಬ್ಬ ಮುನೀಶ್ವರನು ಕುಳಿತು ಧ್ಯಾನದಲ್ಲಿ ಮುಳುಗಿ ಹೋಗಿದ್ದನು.

ಚಂದ್ರನು ಮರದ ಮರೆಯಲ್ಲಿ ನಿಂತು ನೋಡುತ್ತಿರಲು, ಮೈ ತುಂಬಾ ಆಭರಣಗಳನ್ನು ಧರಿಸಿಕೊಂಡು ಒಬ್ಬಳು ಸ್ತ್ರೀ ಆಶ್ರಮಕ್ಕೆ ಬಂದು ಮುನೀಶ್ವರನ ಕಾಲಿಗೆ ಅಡ್ಡಬಿದ್ದಳು. ಮುನೀಶ್ವರನು ತಟ್ಟನೆ ಕತ್ತಿಯನೆತ್ತಿ ಅವಳ ಬೆನ್ನಿಗೆ ತಿವಿದು ಕೊಂದು, ಅವಳ ನಗುನಟ್ಟುಗಳನ್ನೆಲ್ಲಾ ತೆಗೆದು ಮೂಟೆಕಟ್ಟಿ ಅಡಗಿಸಿಟ್ಟನು. ಅವಳ ಶವವನ್ನೂ ಅತ್ತ ಎಳೆದು ಯಾವುದೋ ಭಾವಿಯೊಳಗೆ ಹಾಕಿದನು.

ತುಂಬಾ ಕಳವಳದಿಂದ ನೋಡುತ್ತಿದ್ದ ಚಂದ್ರನು ಅಲ್ಲಿಂದ ಕಾಲು ಕೀಳಬೇಕೆಂಬಷ್ಟರಲ್ಲಿ, ಕೆಲವಂದಿ ರಾಜಭಟರು ಬಂದು, ಮುನಿಯ ದೇಹಕ್ಕೆ ಸಿಡಿದ ರಕ್ತವನ್ನು ನೋಡಿ ಬಂಧಿಸಿ, ಆ ಸ್ಥಳವನ್ನೆಲ್ಲಾ ಶೋಧಿಸಿ, ಆಭರಣಗಳನ್ನೂ, ಬಾವಿಯಲ್ಲಿದ್ದ ಶವವನ್ನೂ ಸ್ವಾಧೀನಪಡಿಸಿಕೊಂಡು ಒಯ್ದರು.

"ಅಬ್ಬಾ ! ಪ್ರಪಂಚದಲ್ಲಿ ಇನ್ನೂ ಧರ್ಮವಿದೆ !" ಎಂದುಕೊಂಡನು ಚಂದ್ರ. ಅವನ ಮನಸ್ಸಿನ ಅಶಾಂತಿ ಬಹಳಮಟ್ಟಿಗೆ ತಗ್ಗಿತು. ಮಹಾಪತಿವ್ರತೆಯಾದ ತನ್ನ ಹೆಂಡತಿಯೂ, ಮಹಾಪುರುಷನಾದ ಬ್ರಾಹ್ಮಣ ಯುವಕನಂತಹವರೂ ಪ್ರಪಂಚದಲ್ಲಿರುವುದರಿಂದಲೇ ಧರ್ಮವು ಎಚ್ಚರದಲ್ಲಿದೆ ಎಂದುಕೊಂಡನು. ಆಮೇಲೆ ಅವನು ಪಾಟಲೀಪುತ್ರಕ್ಕೆ ಹೋಗಿ, ತನ್ನ ವರ್ತಕಕಾರ್ಯಗಳನ್ನು ಸಾಧ್ಯವಾದಷ್ಟು ಬೇಗನೇ ಮುಗಿಸಿದನು. ಅವನಿಗೆ ತನ್ನ ಹೆಂಡತಿಯನ್ನು ನೋಡಬೇಕೆಂಬ ಧ್ಯಾನ ಬಲವಾದುದರಿಂದ ಬೇಗನೇ ಹಿಂದಿರುಗಿ ಅರ್ಧರಾತ್ರಿಯ ಹೊತ್ತಿಗೆ ತನ್ನ ಮನೆಯನ್ನು ತಲಪಿದನು.

ತನ್ನ ಶಯ್ಯಾಗಾರದ ಕಿಟಕಿಯಿಂದ ಬೆಳಕು ಬರುವುದನ್ನು ನೋಡಿ, ಅಲ್ಲಿಂದಲೇ ಕರೆಯೋಣವೆಂದು ನೋಡಿದಾಗ ಕೋಣೆಯೊಳಗೆ ತನ್ನ ಹೆಂಡತಿಯೂ, ಬ್ರಾಹ್ಮಣ ಯುವಕನೂ ಇದ್ದರು.

"ದೇವರೇ ! ಇದೆಂತಹ ಅನ್ಯಾಯ !" ಎಂದು ಅವನ ಜೀವವು ಹೊಡೆದುಕೊಂಡಿತು. ಏನು ಮಾಡುವುದೆಂದು ಗೊತ್ತಾಗದೆ ಅವನು ಮಿಳಿಮಿಳಿ ನೋಡಿಕೊಂಡಿರಲು, ಮಾಡಿನ ಮೇಲಿನಿಂದ ಅವರ ಮೇಲೊಂದು ನಾಗರಹಾವು ಬಿದ್ದಿತು. ಅವರಿಬ್ಬರೂ ಬೆಚ್ಚಿಬಿದ್ದು ಎದ್ದು ಅದರಿಂದ ಬಿಡಿಸಿಕೊಳ್ಳುವಾಗ, ನಾಗರಹಾವು ಅವರಿಬ್ಬರನ್ನೂ ಕಡಿದು ಎತ್ತಲೋ ಹೊರಟುಹೋಯಿತು. ಅವರಿಬ್ಬರೂ ಸತ್ತು ಹೋದರು. "ಧರ್ಮವು ತಪ್ಪುಗಾರರನ್ನು ಹೀಗೆಯೇ ಶಿಕ್ಷಿಸುವುದಾಗಿರಬೇಕು !" ಎಂದು ಸಮಾಧಾನ ಹೇಳಿಕೊಂಡನು ಚಂದ್ರ.





# ಧನಕ್ಕಿಂತ ದೊಡ್ಡದು

ಒಂದಾನೊಂದು ನಗರದಲ್ಲಿ ಜಯಶೇಖರನೆಂಬ ದೊಡ್ಡ ಧನಿಕನಿದ್ದನು. ಅವನ ಹೆಂಡತಿಯ ಹೆಸರು ಜಯಪ್ರದ. ತುಂಬಾ ಗುಣವತಿ. ಮದುವೆಯಾಗಿ ಬಹಳ ಕಾಲವಾದರೂ ಅವರಿಗೆ ಮಕ್ಕಳಾಗಿರಲಿಲ್ಲ. ಇದೊಂದು ಕೊರತೆ ದಂಪತಿಗಳನ್ನು ಕೊರೆಯುತ್ತಿದ್ದಿತು. ಏನೇನೋ ವ್ರತ, ಉಪವಾಸಗಳೆಲ್ಲಾ ಆದ ಮೇಲೆ, ಆ ದಂಪತಿಗಳು ಸಪರಿವಾರವಾಗಿ ತೀರ್ಥಯಾತ್ರೆಗೆ ಹೊರಟರು.

ತೀರ್ಥಯಾತ್ರೆ ಸುಗಮವಾಗಿಯೇ ಸಾಗಿತು. ಊರಿಗೆ ಹಿಂದಿರುಗಿ ಬರುವಾಗ ಅವರ ದೇಶದ ಸರಿಹದ್ದಿನಲ್ಲಿರುವ ಅರಣ್ಯದಲ್ಲಿ ದೊಡ್ಡದೊಂದು ಕಳ್ಳರ ಗುಂಪು ಅವರನ್ನು ಮುತ್ತಿತು. ಜಯಶೇಖರನೊಂದಿಗಿದ್ದ ಅವನ ಪರಿವಾರದವರೆಲ್ಲಾ ಹೆದರಿ ಓಡಿ ಹೋದರು. ಕಳ್ಳರು ಜಯಶೇಖರನನ್ನೂ, ಅವನ ಹೆಂಡತಿಯನ್ನೂ ಸರ್ವಾಂಗ ಸುಲಿಗೆ ಮಾಡಿದರು.

ಅದೇ ಸಮಯದಲ್ಲಿ ಕಳ್ಳರಲ್ಲಿ ಕೆಲವರು ಜಯಪ್ರದಳ ಅಂದಚೆಂದಗಳನ್ನು ನೋಡಿ ಮೋಹಿಸಿ ಬಲಾತ್ಕರಿಸಲು ಪ್ರಯತ್ನಿಸಿದರು. ಅದನ್ನು ನೋಡಿ ಕಳ್ಳರ ನಾಯಕನು ಭಯಂಕರವಾಗಿ ಗರ್ಜಿಸಿ ಅವರನ್ನು ತಡೆದು, "ಎಷ್ಟುಸಾರಿ ಹೇಳಿಲ್ಲ ನಿಮಗೆ? ಹೆಂಗುಸರ ತಂಟೆಗೆ ಹೋಗಕೂಡದೆಂದು? ನಮಗೆ ಬೇಕಾದದ್ದು ಧನ; ಇದಕ್ಕಾಗಿ ತಾನೇ ನಾವು ಪಾಪ ಪುಣ್ಯ ನೋಡದೆ ಈ ಅರಣ್ಯದಲ್ಲಿ ತಿರುಗುತ್ತಾ ದಾರೀ ದೋಚುವ ಕೆಲಸ ಮಾಡೋದು? ಸಿಕ್ಕುವ ಹಣದಲ್ಲೇ ತೃಪ್ತರಾಬೇಕಲ್ಲದೆ, ಇನ್ನು ಮೇಲೆ ಇಂಥಾ ಹೀನ ಕಾರ್ಯಕ್ಕೆ ಕೈ ಹಾಕಿದಿರೆಂದರೆ ನಿಮ್ಮ ತಲೆಗಳುಳಿಯಲಾರವು! ಜಾಗ್ರತೆ!" ಎಂದು ನಿಂದಿಸಿ ಬುದ್ಧಿ ಹೇಳಿದನು.

ಆ ವಿಧವಾಗಿ ಮಾನ ದಕ್ಕಿಸಲ್ಪಟ್ಟ ಜಯಪ್ರದ ಕಳ್ಳರ ನಾಯಕನೊಂದಿಗೆ, "ಅಣ್ಣಾ, ನಮ್ಮ ಹತ್ತಿರ ಇರುವುದನ್ನೆಲ್ಲಾ ನೀನು ಕಸಿದುಕೊಂಡರೂ ನಿನ್ನ ಋಣ ತೀರಲಿಲ್ಲ. ಆ ಋಣವನ್ನು ಮರೆಯಲಾರೆ, ಎಂದಾದರೂ ತೀರಿಸುತ್ತೇನಣ್ಣಾ!" ಎಂದಳು.

ತರುವಾಯ ಜಯಶೇಖರನೂ ಜಯಪ್ರದಳೂ ಎಷ್ಟೋ ಪ್ರಯಾಸಗಳನ್ನು ತಾಳಿಕೊಂಡು ತಮ್ಮ ಮನೆಗೆ ಹೋಗಿ ತಲಪಿದರು.

ಸ್ವಲ್ಪಕಾಲ ಕಳೆದ ಮೇಲೆ ಕಳ್ಳರ ನಾಯಕನು ಏನೋ ಕೆಲಸದ ಮೇಲೆ ನಗರಕ್ಕೆ ಬಂದನು. ಅವನು

ವೈ. ಎಸ್. ರಾಜೇಶ್ವರಿ

ದೊಡ್ಡ ಕಳ್ಳನಾದುದರಿಂದ, ಅವನನ್ನು ಹಿಡಿದು ಕೊಟ್ಟವರಿಗೆ ಬಹುಮಾನ ಕೊಡುವುದಾಗಿ ರಾಜನು ಪ್ರಕಟಿಸಿದ್ದನು. ನಗರದಲ್ಲಿ ಅವನನ್ನು ಗುರುತಿಸಿದ ರಾಜಭಟರು ಹಿಡಿಯಲು ಬೆನ್ನು ಹತ್ತಿದರು. ಅವನು ತಪ್ಪಿಸಿಕೊಂಡು ಓಡಿದನು.

ಅಲ್ಲಿ ಇಲ್ಲಿ ತಿರುಗಿ ಓಡುತ್ತಿದ್ದ ಆ ಕಳ್ಳ, ಒಂದಾನೊಂದು ಮನೆಯೊಳಗೆ ತೂರಿ, ಭಟರಿಗೆ ತನ್ನ ಜಾಡು ತಿಳಿಯದಂತೆ ಉಪಾಯವಾಗಿ ತಪ್ಪಿಸಿಕೊಂಡನು. ಆದರೆ ಆ ಮನೆ ಜಯಶೇಖರನದೇ.

ಜಯಶೇಖರನು ಕಳ್ಳರನಾಯಕನ ಗುರುತು ಹಿಡಿದುಬಿಟ್ಟನು. ಹಿಂದೊಮ್ಮೆ ಆ ಕಳ್ಳನೇ ತನ್ನ ಗುಂಪಿನೊಂದಿಗೆ ಬಂದು ತನ್ನನ್ನೂ ತನ್ನ ಹೆಂಡತಿಯನ್ನೂ ಪೂರ್ತಿ ದೋಚಿಸಿದವನು ! ಈ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು ಅವನನ್ನು ಅಡಗಿಸಿಡುವ ನೆವನದಲ್ಲಿ ಒಂದು ಕತ್ತಲೆ ಕೋಣೆಯೊಳಗೆ ಕಳುಹಿಸಿ, ಹೊರಗೆ ಚಿಲುಕ ಹಾಕಿದನು. ಆಮೇಲೆ ತಾನು ಕಳ್ಳನನ್ನು ಹಿಡಿದಿರುವ ಸಂಗತಿಯನ್ನು ರಾಜನೊಂದಿಗೆ ಹೇಳಲು ಬೇಗಬೇಗನೆ ಹೊರಟುಹೋದನು. ರಾಜನು ಕೊಡುವ ಬಹುಮಾನದಿಂದ ತನಗಾದ ನಷ್ಟವು ಸರಿಹೋಗುತ್ತದೆಂದೂ ಲೆಕ್ಕ ಹಾಕಿದನು. ಒಳಗಿದ್ದ ಅವನ ಹೆಂಡತಿ ಜಯಪ್ರದಳೂ ಆ ಕಳ್ಳನ ಗುರುತು ಹಿಡಿದಳು.

ಅವಳು ಗಂಡ ಹೊರಟುಹೋಗುವವರೆಗೂ ಏನೂ ಅರಿಯದವಳಂತೆ ಸುಮ್ಮನಿದ್ದಳು. ಅನಂತರ ಅವಳು ಕೋಣೆಯ ಬಾಗಿಲು ತೆರೆದು, ಕಳ್ಳರ ನಾಯಕನನ್ನು ಹೊರಗೆ ಬರಿಸಿ, "ಅಣ್ಣಾ, ಹಿಂದೆ ಒಂದು ದಿನ ನೀನು ನನ್ನ ಮಾನವನ್ನು ಕಾಪಾಡಿದೆ. ಈ ದಿನ ನಾನು ನಿನ್ನ ಪ್ರಾಣವನ್ನು ಕಾಪಾಡಿ ನಿನ್ನ ಋಣದಿಂದ ಮುಕ್ತಳಾಗುತ್ತೇನೆ. ಹೋಗಣ್ಣಾ ಹೋಗು. ಸ್ವಲ್ಪ ಜಾಗರೂಕತೆಯಿಂದಿರು" ಎಂದಳು.

ಕಳ್ಳರನಾಯಕನು ಕಣ್ಣೀರಿಳಿಸುತ್ತ, ಎಷ್ಟೋ ಕೃತಜ್ಞತೆಯಿಂದ ಅವಳ ಕಾಲಿಗೆ ನಮಸ್ಕಾರ ಮಾಡಿ ಹೊರಟುಹೋದನು. ಜಯಪ್ರದ ಕೋಣೆಯ ಬಾಗಿಲನ್ನು ಮೊದಲಿನಂತೆಯೇ ಹಾಕಿಟ್ಟು, ಗಂಡನು ರಾಜಭಟರೊಂದಿಗೆ ಬಂದ ಮೇಲೆ, ಕಳ್ಳನು ಹೇಗೆ ತಪ್ಪಿಸಿಕೊಂಡನೋ ತನಗೇನೂ ತಿಳಿಯದೆಂದು ಹೇಳಿಬಿಟ್ಟಳು. ಅವನು ಹಲ್ಲಿಯ ಹಾಗೆ ಗೋಡೆ ಮೇಲೇರಿ ಅಟ್ಟಹಿಡಿದು ಹಾರಿಹೋಗಿರಬೇಕೆಂದು ತರ್ಕಮಾಡಿಕೊಂಡರು ಎಲ್ಲರೂ.

ಆಮೇಲೆ ಕಳ್ಳರನಾಯಕ ಕಳ್ಳತನಮಾಡಲೇ ಇಲ್ಲ. ಧನಕ್ಕಿಂತ ದೊಡ್ಡದಾಗಿ ಪ್ರಾಮಾಣಿಕತೆ, ಕೃತಜ್ಞತೆ ಮೊದಲಾದುವೆಷ್ಟೋ ಇವೆ ಎಂಬುದನ್ನು ಅರಿತು, ಕಷ್ಟಪಟ್ಟು ಸಂಪಾದಿಸಿ ಬದುಕುವ ಪದ್ಧತಿಯನ್ನು ಅವಲಂಬಿಸಿದನು.





# ಆಸೀರ್‌ಗಢದ ರಕ್ಷಣೆ

ಖಾನ್‌ದೇಶದೊಳಗಿನ ಆಸೀರ್‌ಗಢ ದುರ್ಗವು ದೇಶದೊಳಗಿನ ದುರ್ಗಗಳಲ್ಲಿ ಬಲವಾದುದು. ಅಂತಹ ದುರ್ಗವು ಪ್ರಪಂಚದಲ್ಲೇ ಇಲ್ಲವೆಂದು ಕೆಲವರು ಹೇಳುವರು. ೯೦೦ ಅಡಿಗಳೆತ್ತರದ ಬೆಟ್ಟದ ಮೇಲಿರುವ ಈ ದುರ್ಗವು ಶತ್ರುಗಳಿಗೆ ದುರ್ಭೇದ್ಯವಾಗಿತ್ತು.



ಸೈನಿಕನೊಬ್ಬ ಆ ಪ್ರಾಂತವಾಗಿ ಹೋಗುತ್ತಿದ್ದಾಗ, ನಾಯಿಯೊಂದು ಜಿಂಕೆಯನ್ನು ಅಟ್ಟಿಸಿಕೊಂಡು ಹೋಗುತ್ತಿರಲು, ಜಿಂಕೆ ಹಿಂದಿರುಗಿ ನಾಯಿಯನ್ನೇ ಓಡಿಸಿಕೊಂಡು ಹೋಯಿತಂತೆ. ಇದನ್ನು ನೋಡಿ, "ಇದು ಬಹಳ ಸಾಹಸದ ಸ್ಥಳ. ಇಲ್ಲಿಯೇ ಸ್ಥಿರಪಡುತ್ತೇನೆ" ಎಂದುಕೊಂಡನಂತೆ ಆ ಸೈನಿಕ.



ಆ ಸೈನಿಕನ ಮೊಮ್ಮಗನೇ ಖಾನ್‌ದೇಶ ರಾಜ್ಯವನ್ನು ಸ್ಥಾಪಿಸಲು, ಅಲ್ಲಿದ್ದ ಜಮೀನ್ದಾರರನ್ನೆಲ್ಲಾ ಯುದ್ಧದಲ್ಲಿ ಸೋಲಿಸಿದನು. ಅವನೇ ಬ್ರಹ್ಮಾಂಡವಾದ ಆಸೀರ್‌ಗಢವೆಂಬ ದುರ್ಗವನ್ನು ನಿರ್ಮಿಸಿದನು.



ಅಕ್ಬರ್ ಚಕ್ರವರ್ತಿ ಅಸೀರ್‌ಗಢದ ಮೇಲೆ ಆಕರ್ಷಿತನಾಗಿ ದೊಡ್ಡ ಸೇನೆಯೊಂದಿಗೆ ಬಂದನು. ಸೈನಿಕರು ಕೋಟೆಯ ಸುತ್ತಲೂ ಕಂದಕಗಳನ್ನು ಅಗೆದ ನಂತರ, ದುರ್ಗಾಧಿಪತಿಯಾದ ಬಹದುರ್‌ಷಹನನ್ನು ತನಗೆ ಶರಣಾಗುವಂತೆ ಹೇಳಿ ಕಳಿಸಿದನು ಅಕ್ಬರ್.



ಬಹದುರ್‌ಷಹನು ಅಂಜುಕುಳಿ. ಆದರೆ ದುರ್ಗಪಾಲಕನಾದ ಮಲಿಕ್‌ಯಾಕುಬ್ ಎಂಬ ಅಬಿಸೀನಿಯಾದವನು ಬಹದುರ್‌ಷಹನೊಂದಿಗೆ "ಅಕ್ಬರ್ ಯಾವಾಗಲೂ ಇಲ್ಲಿರಲಾರನು. ನಾವು ಬಿಡದೆ ಹೋರಾಡೋಣ. ಒಂದು ವರ್ಷದ ಮೇಲಾದರೂ ಶತ್ರು ಹೊರಟು ಹೋಗದೆ ಕುಳಿತಿರಲಾರನು" ಎಂದನು.



ದುರ್ಗದಲ್ಲಿ ಐವತ್ತು ಸಾವಿರ ಮಂದಿ ಜನರಿದ್ದರು. ಅವರು ಮೂರು ಸಾವಿರ ಫಿರಂಗಿಗಳನ್ನು ಮೊಗಲ ಸೈನಿಕರ ಮೇಲೆ ಸಿಡಿಸಿದರು. ಯಾಕುಬನೇ ಯುದ್ಧ ನಡೆಸಿದನು.

ಕೋಟೆಯೊಳಗೆ ಕೆಲವು ವರ್ಷಗಳಿಗೆ ಸರಿ ಹೋಗುವಂತೆ ಆಹಾರ ವಸ್ತುಗಳಿದ್ದುವು. ಯಾಕುಬ್ ಎಷ್ಟು ಧೈರ್ಯ ಹೇಳಿದರೂ ಬಹದುರ್‌ಷಹನಿಗೆ ಧೈರ್ಯವಿರಲಿಲ್ಲ. ಒಂದು ದಿನ ಅವನು ಮೊಕರಾಬ್, ಬಹದುರ್‌ಖಾನ್ ಎಂಬ ಯಾಕುಬನ ಮಗಂದಿರನ್ನು ಕರೆದುಕೊಂಡು ಬೆಟ್ಟವಿಳಿದು ಅಕ್ಬರನಿಗೆ ಶರಣಾದನು.





ಅಕ್ಬರ್ ಬಹದುರ್‌ಖಾನನನ್ನು ತನ್ನ ಅಧೀನದಲ್ಲಿಟ್ಟುಕೊಂಡು ಮೊಕರಾಬನ ಮೂಲಕ, ಕೋಟೆಯನ್ನು ತನ್ನ ಅಧೀನ ಮಾಡಿದರೆ ನಡೆದುದನ್ನೆಲ್ಲಾ ಕ್ಷಮಿಸುವೆನೆಂದು ಯಾಕುಬನಿಗೆ ಹೇಳಿ ಕಳಿಸಿದನು. ಮೊಕರಾಬ್ ಈ ಮಾತು ಹೇಳಿದ ಕೂಡಲೇ ಯಾಕುಬ್, "ನಿನ್ನ ಹೇಡಿ ಮುಖ ನನಗೆ ತೋರಿಸಬೇಡ !" ಎಂದನು.

ಮೊಕರಾಬ್ ಅಕ್ಬರ್ ಮತ್ತು ಬಹದುರ್‌ಷಹನ ಬಳಿಗೆ ಹಿಂದಿರುಗಿ ಬಂದನು. ಅವನು ಶುಭವಾರ್ತೆ ತಂದನೆಂದು ಅಕ್ಬರ್ ಆಶಿಸಿದ್ದ. ಮೊಕರಾಬ್ ಅವರ ಮುಂದೆ ಬಂದು ಥಕ್ಕನೆ ಸುರಿಗತ್ತಿ ತೆಗೆದು ತನ್ನನ್ನುತಾನೇ ತಿವಿದುಕೊಂಡು ಸತ್ತುಬಿದ್ದನು.





ದುರ್ಗದಲ್ಲಿ ಬಹದುರ್‌ಷಹನ ಏಳು ಮಂದಿ ಕುಮಾರರಿದ್ದರು. ಬಹದುರ್‌ಷಹನು ಶತ್ರುವಿಗೆ ಶರಣಾದರೂ ಯಾಕುಬ್, ಏಳು ಮಂದಿ ಕುಮಾರರನ್ನು ಕರೆದು, ಅವರಲ್ಲಿ ಯಾರು ಯುದ್ಧಮಾಡಿ ಗೆಲ್ಲುವರೋ ಅವರಿಗೇ ಸಿಂಹಾಸನ ಕೊಡುವುದಾಗಿ ಹೇಳಿದನು. ಏಳು ಮಂದಿಗಳಲ್ಲಿ ಒಬ್ಬನೂ ಮಾತಾಡಲಿಲ್ಲ.



ಕ್ರಮವಾಗಿ ಅಸೀರ್‌ಗಢದ ಅಧಿಕಾರಿಗಳೆಲ್ಲರೂ ಮೊಗಲರ ಪಕ್ಷಕ್ಕೆ ತಿರುಗಿ ಹೋಗಿಬಿಟ್ಟರು. ಹೇಡಿಗಳೂ, ಹಿಂದೋಡುವವರೂ ದುರ್ಗವನ್ನು ರಕ್ಷಿಸಲಾರರೆಂದು ಯಾಕುಬನಿಗೆ ಗೊತ್ತಿತ್ತು. ಅವನು ತನಗಾಗಿ ಒಂದು ಗುಂಡಿಯನ್ನು ತೋಡಿಕೊಂಡು, ಆಪ್ತರೊಂದಿಗೆ ಕೊನೆಯ ಸಂದರ್ಶನ ಮಾಡಿ ವಿಷ ಕುಡಿದು ಸತ್ತುಬಿದ್ದನು.



ಕೋಟೆ ಮೊಗಲರ ವಶವಾಯಿತು. ಯಾಕುಬ್ ಅವರಿಗೆ ಸಿಗಲಿಲ್ಲ. ತನ್ನ ದೇಹದಲ್ಲಿ ಜೀವವಿರುವವರೆಗೂ ಕೋಟೆಯನ್ನು ಕಾಪಾಡುವೆನೆಂದು ಅವನು ಪ್ರಮಾಣ ಮಾಡಿದ್ದನು. ಅದು ಅಸಾಧ್ಯವೆಂದು ತೋರುತ್ತಲೇ ಆತ್ಮಹತ್ಯ ಮಾಡಿಕೊಂಡನು. ಉದ್ಯೋಗಸ್ಥರಿಗೆ ಲಂಚ ಕೊಟ್ಟು ಮೊಗಲರು ಕೋಟೆಯನ್ನು ವಶಪಡಿಸಿಕೊಂಡರು. ಕೋಟೆಯೊಳಗೆ ಕೆಲವು ವರ್ಷಗಳಿಗೆ ಸಾಲುವಷ್ಟು ಆಹಾರ ಪದಾರ್ಥಗಳಿದ್ದುವು !

# ಕಥಾ ಶೀರ್ಷಿಕೆಯ ಸ್ಪರ್ಧೆ

## ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!

?

ಶ್ರೀಗಿರಿ ಗ್ರಾಮದಲ್ಲಿ ಎಲ್ಲರೂ ರೈತರೇ. ಹೆಂಗುಸರೂ ಗಂಡುಸರೂ ಸಮಾನವಾಗಿ ಕಷ್ಟಪಟ್ಟು ದುಡಿಯುತ್ತಿದ್ದರು. ಆದರೆ ಮಲ್ಲನ ಹೆಂಡತಿ ಮಲ್ಲಿಗೆ ತುಂಬ ಮೂಢವಿಶ್ವಾಸಗಳಿದ್ದುವು. ಮಂತ್ರ, ತಂತ್ರ ತಾಯತ್ತುಗಳು ಸಂಪಾದನೆಯನ್ನು ಹೆಚ್ಚಿಸುತ್ತವೆಂದೂ, ಕಷ್ಟಪಡದೆ ಬಹುಸುಲಭದಲ್ಲಿ ಫಲಿಸುತ್ತದೆಂದೂ ಅವಳ ನಂಬುಗೆ. ಆದುದರಿಂದ ಅವಳು ಗುಡಿಗುಂಡಾರಗಳಲ್ಲಿ ಸುತ್ತುತ್ತ ಹೊಲಮನೆ ಕೆಲಸಗಳಲ್ಲಿ ಅಸಡ್ಡೆಯಾಗಿದ್ದಳು.

ಎಲ್ಲಿಂದಲೋ ಅವಳು ಒಂದು ಗಡ್ಡೆಯನ್ನು ತಂದು ಅದಕ್ಕೆ ಪೂಜೆ ಮಾಡಿ ಅದನ್ನು ಕಣಜದೊಳಗೆ ಇಡುತ್ತ, "ಇದನ್ನು ಒಬ್ಬರು ಸಾಧುಗಳು ಕೊಟ್ಟಿದ್ದಾರೆ. ಇದರಿಂದ ಕಣಜ ಧಾನ್ಯದಿಂದ ತುಂಬುತ್ತಾ ಇರುತ್ತೆ" ಎಂದಳು ಗಂಡನೊಂದಿಗೆ.

ಮರುದಿನ ಮಲ್ಲ ಬೆಳಗ್ಗೆ ಎಷ್ಟು ಹೊತ್ತಾದರೂ ಏಳಲಿಲ್ಲ. ಮಲ್ಲಿ ಅವನನ್ನು ಎಬ್ಬಿಸಿ, "ಇದೇನೊಂದ್ರೀ, ಇಷ್ಟು ಹೊತ್ತಾದರೂ ಎದ್ದು ಹೊಲಕ್ಕೆ ಹೋಗಲಿಲ್ಲವೇಕೆ?" ಎಂದಳು.

"ಕಣಜದಲ್ಲಿ ಧಾನ್ಯದ ಗಡ್ಡೆಯಿದೆಯಲ್ಲಾ? ಕಣಜ ತುಂಬುತ್ತೆ. ನಾನೇಕೆ ಕಷ್ಟಪಡಬೇಕು?" ಎಂದ ಮಲ್ಲ.

ಈ ಮಾತಿನಿಂದ ಮಲ್ಲಿಯ ಕಣ್ಣು ತೆರೆಯಿತು. ಕಣಜದಿಂದ ಗಡ್ಡೆ ಹೋಯಿತು. ಮಲ್ಲಿ ಗಂಡನೊಂದಿಗೆ ತಾನೂ ದುಡಿಯ ತೊಡಗಿದಳು.

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟುಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು, "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩ ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಫಿಬ್ರವರಿ ೧೫ ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೮ ಏಪ್ರಿಲ್ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ಡಿಸೆಂಬರ್ ಸ್ಪರ್ಧೆಯ ಫಲಿತಾಂಶ: **ತನ್ನ ತಾನೇ ಅರಿತ ಜಾಣ**

ಕಳುಹಿಸಿದವರು: **ಎಂ. ಎಸ್. ರುದ್ರಾರ್ಯ, ಮಡುವಿನ ಹಳ್ಳಿ, ನಂಜನಗೂಡು ತಾಲೂಕು, ಮೈಸೂರು.**

# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೮ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



P. V. Subramanyam

★



S. G. Seshagiry

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಫಿಬ್ರವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಡಿಸೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : **ತೇಲಿಸುವ ಆಲೋಚನೆಯಲ್ಲಿ ತೇಲುವುದು**

ಎರಡನೇ ಫೋಟೋ : **ತೇಲಾಡುವ ಚೆಂಡ ನೋಡುವುದು**

ಕಳುಹಿಸಿದವರು : **ಶ್ರೀಮತಿ ಸುಭದ್ರಾ ಶೇಷನಾರಾಯಣ,**

ಎನ್. ಎ. ೪೫೬, ಬೆಲ್ ಕಾಲನಿ, ಜಾಲಹಳ್ಳಿ, ಬೆಂಗಳೂರು - ೧೩.

# NP 007

# ಬಬಲ್ ಗಮ್

**ಉಚಿತ**

ನಿಮ್ಮ 007 ಪ್ಯಾಕ್‌ನಲ್ಲಿ ನಿಮಗೆ ಬಿಳಿಯ ಬಬಲ್ ಗಮ್ ಸಿಕ್ಕಿದರೆ, ಆಗಲೇ ಅಂಗಡಿಯವನಿಂದ ಇನ್ನೊಂದು 007 ಬಬಲ್ ಗಮ್‌ನ್ನು ಕೇಳಿ ಉಚಿತವಾಗಿ ಪಡೆಯಿರಿ.

ಆಟಗಳಲ್ಲಿ ನಿಜವಾದ ಮಲ್ಲ, ಮತ್ತು ಪಾಠಗಳಲ್ಲಿ ಪ್ರವೀಣ! ಅವನಿಗೆ ಗೊತ್ತಿದೆ ಕೇವಲ NP 007 ಬಬಲ್ ಗಮ್ ಹೆಚ್ಚು ದೊಡ್ಡದಾದ, ಹೆಚ್ಚು ಸೊಗಸಾದ ಬುದ್ಬುದಗಳನ್ನು ಕೊಡಬಲ್ಲುದು, ಎಂದು. ಏಕೆಂದರೆ ಅದರಲ್ಲಿ '<u>ಬುದ್ಬುದ ಶಕ್ತಿ</u>' ತುಂಬಿತುಳುಕುತ್ತಿದೆ!

NP 007 ಬಬಲ್ ಗಮ್‌ನ ಸಹಾಯದಿಂದ ನೀವೂ ಬುದ್ಬುದ ಮಲ್ಲನಾಗಬಹುದು! ಹೆಚ್ಚು ದೊಡ್ಡದಾದ, ಸೊಗಸಾದ ಬುದ್ಬುದಗಳನ್ನು ಊದಿ ಉಬ್ಬಿಸಿ ಆನಂದಿಸಿರಿ.




ಇಂತಹ ಬುದ್ಬುದಗಳನ್ನು ನಿಮಗೆ ಕೇವಲ 007 ಬಬಲ್ ಗಮ್ ನೀಡಬಲ್ಲುದು. ಐ.ಎಸ್.ಐ. ಗುಣಮುದ್ರೆಯನ್ನು ಹೊಂದಿರುವ ಏಕಮಾತ್ರ ಬಬಲ್ ಗಮ್‌ನ ತಯಾರಕರೂ, ಈ ಕ್ಷೇತ್ರದಲ್ಲಿ ಮೊದಲಿಗರೂ ಆದ NP ಅವರ ಕೊಡುಗೆ.

**NP ಬಬಲ್‌ಗಮ್ ಎಂದರೆ 'ಬುದ್ಬುದ ಶಕ್ತಿ'**

## ಜಯವಾಗಲಿ

# ಬುದ್ಬುದ ಮಲ್ಲನಿಗೆ

*Dattaram–NP-15 Kan*

**ದಿ ನ್ಯಾಷನಲ್ ಪ್ರೊಡಕ್ಟ್ಸ್**, ಬೆಂಗಳೂರು.




# ಮಾಯಾ ಸರೋವರ

## ೨೫

[ಆಕಾಶದಲ್ಲಿ ಹಾರುವ ಹಂಸ ರಥದಿಂದ ಜಾರಿಬಿದ್ದ ಮಾಯಾ ಸರೋವರೇಶ್ವರನು, ಅರಣ್ಯದ ಒಂದು ಕಡೆಯಲ್ಲಿದ್ದ ನರಭಕ್ಷಕ ಜಾತಿಯವರ ಬಿಸಿ ನೀರು ಹಂಡೆಯೊಳಗೆ ಬಿದ್ದನು. ಇನ್ನೂ ಕೆಲವರು ನೆಲಕ್ಕೆ ಬಿದ್ದಿದ್ದಾರೆಂದು ಅವನು ಹೇಳಲು ನರಭಕ್ಷಕರು ಅವನನ್ನು ಹಂಡೆಯಿಂದೆತ್ತಿ ಹುಡುಕುತ್ತಿರುವಾಗ, ಸಿದ್ಧಸಾಧಕನ ಕೂಗು ಅವರಿಗೆ ಕೇಳಿಸಿತು.]

ಸಿದ್ಧಸಾಧಕನು ತನ್ನ ಆರಾಧ್ಯ ದೈವನಾದ ಮಹಾಕಾಳನಿಗೆ ಜಯಜಯಕಾರ ಮಾಡುತ್ತಾ ಬರುವ ಶಬ್ದ ಕೇಳಿ ಮಾಯಾ ಸರೋವರೇಶ್ವರನು, ನೆಲದಲ್ಲಿ ಕಾಲು ಹುಗಿದವನಂತೆ ನಿಂತು ಗಡಗಡ ನಡುಗುವುದನ್ನು ನೋಡಿ, ನರಭಕ್ಷಕರ ಪೂಜಾರಿ ಮುದುಕ ಆಶ್ಚರ್ಯ ಪಟ್ಟನು.

ಆ ನರಮನುಷ್ಯನ ಕೂಗಿಗೆ ಈ ನರಮನುಷ್ಯ ಹೀಗೇಕೆ ಹೆದರುತ್ತಾನೆ ? ಒಂದುವೇಳೆ ಕೂಗುವವನು ಯಾವುದೋ ಬೇರೆ ಭಯಂಕರ ಜಾತಿಯವನೋ ? ಆ ಪೂಜಾರಿಯು ಜತೆಯಲ್ಲಿದ್ದ ನಾಲ್ಕಾರು ನರಭಕ್ಷಕರು ಮಾತ್ರ ಆ ಶಬ್ದ ಕೇಳಿಬಂದ ಕಡೆಗೆ ಉತ್ಸಾಹದಿಂದ ಓಡಿದರು ದೇವಿ ಇನ್ನಾರನ್ನೋ ಕಳುಹಿಸಿದಳೆಂದು.

ಆಗ ಮಾಯಾ ಸರೋವರೇಶ್ವರನು ಎಚ್ಚರಕ್ಕೆ ಬಂದು ನರಭಕ್ಷಕ ಪೂಜಾರಿಯೊಂದಿಗೆ, "ನಿಮ್ಮವರನ್ನು ಹಿಂದಕ್ಕೆ ಕರೆಯಿರಿ. ಆ ಕೂಗು ಮಹಾಕಾಳನ ಭಕ್ತನದು. ಅವನು ಸಾಮಾನ್ಯದವನಲ್ಲ. ಅವನ ಮಂತ್ರಶಕ್ತಿಗಳ ಮುಂದೆ ನಿಮ್ಮ ಈಟಿಕೋಲುಗಳೆಲ್ಲ ಹುಲ್ಲು ಕಡ್ಡಿಗಳಿಗೆ ಸಮ ! ಅವನಿಗೆ ಕೋಪ ಬಂದರೆ ಈ ಅರಣ್ಯವೆಲ್ಲವೂ ಉರಿದು ಸುಟ್ಟು ಬೂದಿಯಾದೀತು !" ಎಂದನು.



347



ಅದನ್ನು ಕೇಳಿ ಪೂಜಾರಿ ಗಡಗಡನೆ ನಕ್ಕು, "ನಮ್ಮ ನರಭಕ್ಷಕರಿಗೆ ನರಮನುಷ್ಯರು ಮಾಡುವ ಯಾವ ಮಂತ್ರ ತಂತ್ರಗಳ ಭಯವೂ ಇಲ್ಲ. ನಮ್ಮ ಆಹಾರಕ್ಕಾಗಿ ಕಾಡಮ್ಮಾ ತಾಯಿ ಇನ್ನೊಬ್ಬ ಮನುಷ್ಯನನ್ನು ಕಳುಹಿಸಿದ್ದಾಳೆ. ಸುಮ್ಮನೆ ಬುರುಡೇ ಬಿಟ್ಟು ನಮ್ಮನ್ನು ಹೆದರಿಸಬೇಡ. ಅವನು ಪಾಪ, ಕಡೇಗಾಲ ಬಂತೂಂತ ಏನೋ ಕೂಗಿಕೊಳ್ಳುತ್ತ ನಮ್ಮ ಬಾಯಿಗೆ ಬೀಳಲು ಬರುತ್ತಿದ್ದಾನೆ." ಎಂದನು.

ಅಷ್ಟರಲ್ಲಿ ಆ ಕೂಗಾಳಿಯನ್ನು ಚುಚ್ಚಿಕೊಲ್ಲಲು ಉತ್ಸಾಹದಿಂದ ಓಡಿದ ನರಭಕ್ಷಕರು ಕುಯ್ಯೋ ಮುರ್ಯೋ ಎಂದು ಕೆಟ್ಟ ಆರ್ತನಾದ ಮಾಡುತ್ತ ಬಿದ್ದೆದ್ದುಕೊಂಡು ಓಡುತ್ತಾ ಪೂಜಾರಿಯ ಹತ್ತಿರ ಬಂದು, "ಕಾಪಾಡಿ ಕಾಪಾಡಿ, ಕಾಡಪ್ಪದೇವರ ಪೂಜಾರಿಗಳೇ ! ಆನೆಯಷ್ಟು ದೊಡ್ಡ ನರವಾನರದ ಮೇಲೆ ಯಮಕಿಂಕರನಂಥ ಒಬ್ಬನು ಆರ್ಭಟಿಸಿಕೊಂಡು ಇಲ್ಲಿಗೇ ಬರುತ್ತಾನೆ. ಆತ ನಮ್ಮ ಆಹಾರದ ನರಮನುಷ್ಯನ ಹಾಗೆ ಕಾಣುವುದಿಲ್ಲ. ನಮ್ಮನ್ನೆಲ್ಲಾ ಧ್ವಂಸ ಮಾಡಲಿಕ್ಕೆ ಬಂದ ವಾನರ ಭೂತದ ಹಾಗಿದ್ದಾನೆ." ಎಂದರು.

ಆ ಮಾತು ಕೇಳಿ ನರಭಕ್ಷಕ ಪೂಜಾರಿಗೂ ಭಯವಾಯಿತು. ಓಡಲೋ ಬಿಡಲೋ ಎಂಬಂತೆ ಅಚೀಚೆ ನೋಡತೊಡಗಿದ.

ಅಷ್ಟರಲ್ಲಿ ತುಸುದೂರ ಮರಗಳ ಮರೆಯಿಂದ, ಶೂಲವನ್ನು ಮೇಲೆತ್ತಿ ನರವಾನರವನ್ನು ವೇಗವಾಗಿ ಓಡಿಸುತ್ತ ತಮ್ಮಕಡೆಗೆ ಬರುವ ಸಿದ್ಧಸಾಧಕನನ್ನು ಅವನೂ ನೋಡಿದನು.

"ಇವನಾರೋ ತಿಳಿಯಲಿಲ್ಲ. ಏನೋ ಕೆಟ್ಟಕಾಲ ಬಂದಿದೆ. ನಾವಿಲ್ಲಿಂದ ಓಡಿಹೋಗುವುದೇ ಒಳ್ಳೆಯದು. ಒಬ್ಬನು ಮುಂದಾಗಿ ಓಡಿಹೋಗಿ ಹೆಬ್ಬುಲಿಹೆಗ್ಗನಿಗೆ ಈ ಯಮಕಿಂಕರನನ್ನು ಕುರಿತು ಹೇಳಲಿ. ಈ ಮಹಾಭೂತದವನ ಕೈಯಲ್ಲಿಬಿದ್ದರೆ ನಮ್ಮ ಜಾತಿಯವರಿಗೆ ಸರ್ವನಾಶವೇ ಗತಿ! ಮೊದಲು ಓಡಿಹೋಗಿ ಎಲ್ಲಾದರೂ ಅಡಗಿ ಅವನು ಏಕೆ ಬಂದನೆಂದು ನೋಡೋಣ. ಎಲ್ಲರೂ ಓಡಿರಿ !" ಎಂದು ಹೇಳಿ ಪೂಜಾರಿ, ಓಡಿಹೋಗುವ ಎತ್ತುಗಡೆಯಲ್ಲಿ ತಿರುಗಿದನು.

ಅಷ್ಟರೊಳಗೆ ಸಿದ್ಧಸಾಧಕನು "ಓಂ ! ಮಹಾಕಾಳಾ !" ಎಂದು ಕೂಗಿ, ಓಡಿಹೋಗಲು ನೋಡುವ ನರಭಕ್ಷಕರ ಮುಂದೆ ನರವಾನರದೊಂದಿಗೆ ಬಂದು ನಿಂತು, "ಕದಲಬೇಡಿ ಹೇಡಿಗಳಿರಾ ! ಒಂದಡಿ ಕದಲಿದಿರೆಂದರೆ ನಿಮ್ಮನ್ನೆಲ್ಲಾ ನರವಾನರಕ್ಕೆ ಬಲಿ ಹಾಕಿಬಿಡುತ್ತೇನೆ. ಯಾರು ನೀವೆಲ್ಲಾ ? ನಾನು ಕೇಳುವುದಕ್ಕೆ ಬೇಗ ಉತ್ತರ ಕೊಡಿ. ಕಾಂಚನಮಾಲೆ ಎಂಬ ರಾಜಕುಮಾರಿಯೊಬ್ಬಳು ಹಂಸ ರಥದಿಂದ ಜಾರಿ ಇಲ್ಲೆಲ್ಲೋ ಬಿದ್ದಳು. ನೋಡಿದಿರಾ ? ನಿಮಗೆ ಗೊತ್ತೇ ?" ಎಂದು ಗರ್ಜಿಸಿ ಕೇಳಿದನು. ಸಿದ್ಧಸಾಧಕನು ಹೇಳಿದ ಮಾತುಗಳು ಆ ಪೂಜಾರಿ

ಗಾಗಲೀ, ಇತರ ನರಭಕ್ಷಕರಿಗಾಗಲೀ ಸ್ವಲ್ಪವೂ ಅರ್ಥ ವಾಗಲಿಲ್ಲ. ಪೂಜಾರಿ ಸ್ವಲ್ಪ ಹೊತ್ತು ಏನನ್ನೋ ನೆನಪು ಮಾಡಿಕೊಂಡವನಂತೆ, ಮಾಯಾ ಸರೋ ವರೇಶ್ವರನ ಕಡೆಗೆ ತಿರುಗಿ, ಸಿದ್ಧಸಾಧಕನಿಗೆ ಅವನನ್ನು ತೋರಿಸುತ್ತ, "ಸತ್ಯ ಹೇಳುತ್ತೇನೆ. ನಮ್ಮ ಕಾಡಮ್ಮ ಮಾತಾಯಿ ನಮಗೆ ಆಹಾರವಾಗಿ ಆಕಾಶದಿಂದ ಅವನನ್ನು ಕೆಳಗೆ ಕಳಿಸಿದಳು. ನೀವು ಹೇಳುವ ರಾಜ ಕುಮಾರಿಯ ಸಂಗತಿ ಯಾವುದೂ ನಮಗೆ ಗೊತ್ತಿಲ್ಲ. ಆದು ಅವನಿಗೆ ಗೊತ್ತಿದ್ದೀತು. ಕೇಳಿ ನೋಡಿ" ಎಂದನು.

ಆದುವರೆಗೂ ನರಭಕ್ಷಕರ ವಿಚಿತ್ರ ವರ್ತನೆಯ ಮೇಲೆಯೇ ಲಕ್ಷ್ಯವಿಟ್ಟುಕೊಂಡಿದ್ದ ಸಿದ್ಧಸಾಧಕನು, ಸ್ವಲ್ಪ ದೂರ ಮರಗಳ ಅಡ್ಡದಲ್ಲಿ ನಿಂತಿದ್ದ ಮಾಯಾ ಸರೋವರೇಶ್ವರನನ್ನು ನೋಡಿರಲಿಲ್ಲ. ಈಗ ನೋಡಿದ ಕೂಡಲೇ, "ಇಲ್ಲಿದ್ದಾನೇನು? ಓಹೋ! ನೀನೇಯೇನು ಮಾಯಾ ಸರೋವರೇಶ್ವರ! ಹೇಡಿ ಗಳ ಆರಾಧ್ಯದೇವ! ನಿನ್ನ ಟೋಪೀ ಕಿರೀಟವೂ ನೀನೂ! ಕಳ್ಳನ ಹಾಗೆ ಓಡಿಹೋಗಲು ನೋಡು ವೆಯಾ? ಜಾಗ್ರತೆ! ಶೂಲಕ್ಕೆ ಚುಚ್ಚಿ ಭೂಮಿಯಲ್ಲಿ ಹುಗಿದು ಹಾಕೇನು! ಬಾ ಮುಂದೆ! ಸರಿಯಾಗಿ ನಿಲ್ಲು!" ಎಂದನು.

ಸಿದ್ಧಸಾಧಕನ ಮಾತಿನಿಂದ ಸರೋವರೇಶ್ವರನಿಗೆ ಬಹಳ ಕೋಪಬಂದಿತು. ಅವನು ಕತ್ತಿಯ ಹಿಡಿಯ ಮೇಲೆ ಕೈ ಹಾಕಿ, ಹಲ್ಲು ಕಡಿದು ತನ್ನ ಕೋಪವನ್ನು ಹತ್ತಿಕ್ಕಿಕೊಂಡು, "ಸ್ವಲ್ಪ ನಿನ್ನ ಪ್ರತಾಪವನ್ನು ಹದ್ದಿ ನಲ್ಲೇ ಇಟ್ಟುಕೋ. ನಿನ್ನ ವೇಷಭಾಷೆಗಳನ್ನು ನೋಡಿದರೆ ನೀನೊಬ್ಬ ಕಾಡು ಕಾಪಾಲಿಕ ಎಂಬುದರ ಹೊರತು, ನಿನ್ನ ಊರು ಹೆಸರು ಯಾವುದೂ ನನಗೆ ತಿಳಿಯದು. ನಿನಗೂ ನನಗೂ ಯಾವ ಸಂಬಂಧವೂ ಇಲ್ಲ. ಸರಿಸಮಾನರ ಮೇಲೆ ಮಾತ್ರವೇ ನಾನು ಕತ್ತಿ ಎತ್ತುವವನು. ಆದುದರಿಂದ ಇಷ್ಟಕ್ಕೇ ನಿನ್ನ ಕ್ರೂರ




ಮಾತುಗಳನ್ನು ನಿಲ್ಲಿಸಿ ನಿನ್ನ ದಾರಿ ಹಿಡಿದು ಹೋಗಿ ಬಿಡು" ಎಂದನು ಹೀನಯಿಸುವಂತೆ.

"ಓಹೊ! ದೊಡ್ಡ ದೇವನಿಗೆ ನನ್ನ ಹೆಸರು ದೆಸೆ ತಿಳೀಬೇಕೇನು? ಕೇಳು. ನಾನು ಸಿದ್ಧಸಾಧಕ. ಮಹಾಕಾಳನ ಭಕ್ತ. ನಿನ್ನ ಬಲಪರಾಕ್ರಮ ವೊದ ಲಾದ ಅಂತಸ್ತಿಗೆ ತಕ್ಕ ಬಂಟ ನನಗಿದ್ದಾನೆ. ನಾನು ಇಲ್ಲಿಗೆ ಬರುವಾಗ, ಇಲ್ಲಿ ಎಲ್ಲಿಯಾದರೂ ನಮ್ಮ ರಾಜ ಕುಮಾರಿ ಬಿದ್ದಿದ್ದಾಳೋ ಅಂತ ಹುಡುಕುತ್ತಾ ಬರಲು ಅವನಿಗೆ ಹೇಳಿದ್ದೇನೆ. ಈಗಲೆ ಅವನನ್ನು ಕರೆಯು ತ್ತೇನೆ. ನೋಡುವಿಯಂತೆ" ಎಂದು ಸಿದ್ಧಸಾಧಕನು ದೊಡ್ಡ ಕಂಠ ಸ್ವರದಿಂದ, "ಎಲೋ ಜಲವ್ಯಕಾ! ಎಲ್ಲಿದ್ದೀಯೋ? ಬೇಗ ಬಾ! ನಿಮ್ಮೆಲ್ಲರ ಶತ್ರು ಮಾಯಾ ಸರೋವರೇಶ್ವರ ಇಲ್ಲಿದ್ದಾನೆ. ಅವನಿಗೆ ಸರಿಸಮಾನರೇ ಬೇಕಂತೆ. ಬಂದು ಅವನ ಬಲ ದರ್ಪ ಗಳನ್ನಿಷ್ಟು ಪರೀಕ್ಷೆ ಮಾಡು." ಎಂದು ಕೂಗಿ ಹೇಳಿದನು.

ಜಲವ್ಯಕ ರಾಕ್ಷಸನು ಆಕಾಶ ಮಾರ್ಗದಲ್ಲಿ ವೇಗವಾಗಿ ಬಂದು ಕೆಳಗಿಳಿಯುವಾಗ, ದಪ್ಪವಾದೊಂದು ತೇಗಿನ ಮರದ ಹಿಂದಿನಿಂದ ಮಕರಕೇತು ತನ್ನ ಜಲಗ್ರಹದ ಮೇಲೆ ಮುಂದಕ್ಕೆ ಬಂದು ಅವನನ್ನು ಅಡ್ಡಗಿಸಿದನು. ಅವನ ಸಂಜ್ಞೆಯಂತೆ ಜಲಗ್ರಹ ಆನೆ ಘೀಂಕಾರ ಮಾಡಿ ಸೊಂಡಿಲನ್ನು ಚಾಚಿ ಜಲರಾಕ್ಷಸನನ್ನು ಹಿಡಿಯಲು ನೋಡಿತು.

ಜಲರಾಕ್ಷಸನು ತಟ್ಟನೆ ಹಿಂದಕ್ಕೆ ಹಾರಿ ಬದಿಗೆ ಹೋಗಿ, ಮಿಂಚಿನ ವೇಗದಲ್ಲಿ ಹಿಂದಿರುಗಿ ಕೈಯಲ್ಲಿರುವ ಕಲ್ಲಿನ ಗದೆಯಿಂದ ಜಲಗ್ರಹದ ತಲೆಗೆ ಒಂದೇಟು ಹಾಕಿದನು. ಆ ಪೆಟ್ಟಿಗೆ ಜಲಗ್ರಹವು ಪಕ್ಕಕ್ಕೆ ಒರಗಿ ಬಿತ್ತು. ಮಕರಕೇತು ಭೀಕರವಾದೊಂದು ಗರ್ಜನೆ ಹಾಕಿ, "ಎಲೋ ಜಲವ್ಯಕ ರಕ್ಕಸನೇ! ನಿನ್ನನ್ನೀಗಲೇ ಯಮಲೋಕಕ್ಕೆ ಕಳುಹಿಸಿಬಿಡುತ್ತೇನೆ" ಎಂದು ಕತ್ತಿಯಿಂದ ಅವನ ಕಂಠವನ್ನು ಕಡಿಯಲು ನೋಡಿದನು. ಅಷ್ಟರಲ್ಲಿ ಜಲವ್ಯಕನು ಕದಲಿದುದರಿಂದ ಕತ್ತಿ ಗುರಿ ತಪ್ಪಿ ಅವನ ಭುಜವನ್ನು ಮಾತ್ರ ಗೀರಿ ಛಿಲ್ಲನೆ ರಕ್ತ ಹರಿಸಿತು. ನರವಾನರದ ಮೇಲಿದ್ದು ಇದನ್ನೆಲ್ಲಾ ನೋಡುತ್ತಿದ್ದ ಸಿದ್ಧಸಾಧಕನು, ತನ ಬಂಟನಾದ ಜಲವ್ಯಕನ ಭುಜದಲ್ಲಿ ಹರಿಯುವ ರಕ್ತವನ್ನು ನೋಡಿ ಸಹಿಸದೆ ಆತ್ಮಾವೇಶಗೊಂಡನು. ಜಯಶೀಲನು ಏನಾದರೂ ಪರವಾಯಿಲ್ಲ ಎಂದುಕೊಂಡು, ಮೊದಲು ಮಕರಕೇತುವಿನ ಒಡೆಯನಾದ ಈ ಮಾಯಾ ಸರೋವರದವನನ್ನು ಚಿತ್ರವಧೆ ಮಾಡಿಬಿಡುವುದೇ ಸರಿ, ಎಂಬ ನಿಶ್ಚಯದಲ್ಲಿ ನರವಾನರವನ್ನು ಅವನ ಮೇಲೆ ಹಾರಿಸಿದನು.

ಅದೇ ವೇಳೆಯಲ್ಲಿ ಸುತ್ತುಮುತ್ತಲೂ ಒಮ್ಮೆಗೇ ತಮಟೇ ಶಬ್ದಗಳೂ, ಸಿಳ್ಳುದನಿಗಳೂ ಹೊರಟುವು. ಸಿದ್ಧಸಾಧಕನು ಆಶ್ಚರ್ಯದಿಂದ ಯಾರು ಬರುತ್ತಿರುವುದೆಂದು ನೋಡಿದನು.

ದೊಡ್ಡದೊಂದು ನರಭಕ್ಷಕರ ಗುಂಪೇ ಅಲ್ಲಿಗೆ ಬರುತ್ತಿತ್ತು. ಅವರ ನಾಯಕನಾದ ಹೆಬ್ಬುಲಿಹೆಗ್ಗ ದೊಡ್ಡ ಈಟಿಯನ್ನು ಭುಜದ ಮೇಲಿಟ್ಟುಕೊಂಡು



ತಮ್ಮಟೆಯ ತಾಳಕ್ಕೆ ಸರಿಯಾಗಿ ಹೆಜ್ಜೆ ಹಾಕಿಕೊಂಡು ಬರುವುದನ್ನು ನೋಡಿ ಸಿದ್ಧಸಾಧಕನು ಸ್ತಬ್ಧನಾಗಿ ನಿಂತನು. ಹಾಗೆ ಬಂದ ಹೆಬ್ಬುಲಿಹೆಗ್ಗ ಪೂಜಾರಿಯೊಂದಿಗೆ, "ಏನಿದು ಕಾಡಮ್ಮಾತಾಯಿಯ ಪೂಜಾರಿಯೇ! ಆ ಮಹಾತಾಯಿ ನಮಗೆ ಆಹಾರವಾಗಿ ಒಂದೇಸಾರಿ ಇಷ್ಟು ನರರನ್ನು ಕಳುಹಿಸಿದ್ದು ಆಶ್ಚರ್ಯವಲ್ಲವೇ? ಆಹಾ! ಭಕ್ತರ ಪಾಲಿಗೆ ಜೇನು ಹುಟ್ಟು ನಮ್ಮ ಮಹಾತಾಯಿ!" ಎಂದನು ಸಂತೃಪ್ತಿಯಿಂದ.

ಹೆಬ್ಬುಲಿಹೆಗ್ಗನ ಮಾತುಗಳು, ಅವನ ಕಡೆಯ ನರಭಕ್ಷಕರು ಜೊಲ್ಲು ಸುರಿಸುತ್ತ ತಮ್ಮ ಸುತ್ತಲೂ ಕೂಡುವುದು ಮುಂತಾದುವನ್ನು ನೋಡಿದ ಸಿದ್ಧಸಾಧಕನು, ತನ್ನ ಶತ್ರುಗಳೊಂದಿಗೆ ತನಗೂ ಪ್ರಾಣಾಪಾಯವಿರುವುದೆಂದು ಊಹಿಸಿ, ಸಾಹಸ ಮಾಡುವುದೇ ಒಳ್ಳೆಯದೆಂದುಕೊಂಡು, ಒಮ್ಮೆಗೇ ನರವಾನರವನ್ನು ಮಕರಕೇತುವಿನ ಬಳಿಗೆ ಓಡಿಸಿದನು.

ಮಕರಕೇತು ಗಾಯಗೊಂಡ ಜಲಗ್ರಹದ ತಲೆಯ ಮೇಲೆ ಕೈಗಳಿಂದ ಮೆಲ್ಲನೆ ತಟ್ಟಿ ನೀವುತ್ತ, ಅದು ಎದ್ದುನಿಂತ ಮೇಲೆ, ಅದರ ಮೇಲೆ ಏರಿಕೊಳ್ಳಲು ನೋಡಿದನು.

ಆಗ ಏನೋ ನೆನಪಾಗಿ, ಅಷ್ಟು ದೂರದಲ್ಲಿದ್ದ ಮಾಯಾಸರೋವರೇಶ್ವರನನ್ನು ನೋಡಿ, "ಸರೋವರೇಶ್ವರಾ, ದಯಮಾಡಿ ಈ ಜಲಗ್ರಹವನ್ನು ಆರೋಹಿಸಿಬಿಡಿ. ಈ ಸಿದ್ಧಸಾಧಕನು ಅವಸರದಿಂದ ಆವೇಶಗೊಳ್ಳುವನೇ ಹೊರತು, ತುಂಬ ಒಳ್ಳೆಯವನು. ಇವನ ಮಿತ್ರನಾದ ಜಯಶೀಲನು ನಮಗೆಲ್ಲರಿಗೂ ಮಿತ್ರನೇ. ವೈದ್ಯದೇವನೂ ಅವನೂ ಕೂಡಿ ನಿಮ್ಮ ಹಂಸರಥದಲ್ಲಿ ಈಗಲೇ ಇಲ್ಲಿಗೆ ಬರಲಿದ್ದಾರೆ. ನೀವು ಬರಿನೆಲದ ಮೇಲಿರುವುದನ್ನು ನಾನು ನೋಡಲಾರೆನು. ಬನ್ನಿ, ಏರಿಕೊಳ್ಳಿ, ಈ ಜಲಗ್ರಹವನ್ನು" ಎಂದನು ವಿನಯದಿಂದ.




ನದಿಯ ಬಳಿಯಲ್ಲಿ ನಡೆದ ಸಂಗತಿಗಳೊಂದೂ ತಿಳಿಯದಿದ್ದ ಮಾಯಾಸರೋವರೇಶ್ವರನಿಗೆ ಮಕರಕೇತುವಿನ ಮಾತು ಸ್ವಲ್ಪವೂ ಅರ್ಥವಾಗಲಿಲ್ಲ ಆದರೂ ಜಲಗ್ರಹ ಆನೆಯ ಮೇಲೆ ಏರಿಕೊಂಡರೆ ತನಗೆ ಸ್ವಲ್ಪ ರಕ್ಷಣೆಯಾಗಿದ್ದೀತೆಂದುಕೊಂಡು, ಅವನು ಮೆಲ್ಲನೆ ಅಡಿಮೇಲಡಿ ಇಟ್ಟುಕೊಂಡು ಜಲಗ್ರಹವನ್ನು ಸಮೀಪಿಸಿದನು.

ಅಷ್ಟರೊಳಗೆ ಮಕರಕೇತುವಿನಿಂದ ಕತ್ತಿಯ ಹೊಡೆತ ತಿಂದು ನೋವಿನಿಂದ ಬಿದ್ದುಕೊಂಡಿದ್ದ ಜಲವೃಕ ರಾಕ್ಷಸನು, ಮರದಕಾಂಡವನ್ನು ಹಿಡಿದುಕೊಂಡು ಎದ್ದುನಿಂತು, ಕೈಕಾಲುಗಳನ್ನು ಝಾಡಿಸಿ ಸುಧಾರಿಸಿಕೊಂಡು, ಸಿದ್ಧಸಾಧಕನನ್ನು ನೋಡಿ, "ದೊರೆಗಳೇ, ಏನಪ್ಪಣೆ? ಸಿದ್ಧನಾದೇ" ಎಂದನು.

ಸಿದ್ಧಸಾಧಕನು ಅವನ ಬಳಿಗೆ ಬಂದು, "ಹುಂ, ನಿನಗೆ ತಾಕಿದ ಗಾಯ ಅಷ್ಟೇನೂ ಅಪಾಯಕಾರಿ ಅಲ್ಲವೆಂದು ಕಾಣುತ್ತದೆ. ಮೊದಲು ನಿನ್ನಕಲ್ಲಿನ ಗದೆ




ಯನ್ನು ಎತ್ತಿಕೋ ನೋಡೋಣ" ಎಂದನು. ಅವನು ಗದೆಯನ್ನೆತ್ತಿಕೊಂಡ ಕೂಡಲೇ ಸಿದ್ಧ ಸಾಧಕನು ಮಕರಕೇತುವನ್ನು ನೋಡಿ, "ನೋಡಿ ದೆಯಾ? ಈಗ ಯಾರಿಂದ ಯಾರಿಗೆ ಅಪಾಯವೋ ತಿಳಿಯಿತೇನು?" ಎಂದು ಕೇಳಿದನು.

ಮಕರಕೇತು ತನ್ನ ಕತ್ತಿಯ ಹಿಡಿಯನ್ನು ಬಿಗಿ ಯಾಗಿ ಹಿಡಿದುಕೊಂಡು, "ಈ ನರಭಕ್ಷಕರ ಹೊಲ ಬನ್ನು ನೋಡಯ್ಯ. ಸ್ವಲ್ಪ ಬುದ್ಧಿ ತಂದುಕೊಂಡು ಆಲೋಚನೆ ಮಾಡಯ್ಯ. ಅವರ ಕಾಡಮ್ಮಾತಾಯಿ ತಮ್ಮ ಆಹಾರಕ್ಕಾಗಿ ನಮ್ಮನ್ನೆಲ್ಲಾ ಕಳಿಸಿರುವಳೆಂದು ಭ್ರಮಿಸಿಕೊಂಡಿದ್ದಾರೆ. ಈಗ ನಮ್ಮ ದ್ವೇಷವನ್ನು ಮರೆತು, ಈ ಕ್ರೂರರಿಂದ ನಮ್ಮನ್ನು ನಾವು ಕಾಪಾಡಿ ಕೊಳ್ಳಬೇಕಾಗಿದೆ. ಆಮೇಲೆ ನಾವು ಎಷ್ಟು ಬೇಕಾ ದರೂ ಜಗಳಾಡೋಣ" ಎಂದನು.

"ಭೇಷ್! ಮಕರಕೇತೂ! ನಿನ್ನ ಬುದ್ಧಿಗೆ ಮೆಚ್ಚುತ್ತೇನೆ. ನಮ್ಮ ರಾಜನ ಮಕ್ಕಳನ್ನು ಹುಡುಕಿ ರಕ್ಷಿಸಿ ಅವರಿಗೆ ಒಪ್ಪಿಸದೆ, ನಾನಾಗಲೀ ಜಯಶೀಲ ನಾಗಲೀ ಯಾವ ನರಭಕ್ಷಕರಬಾಯಿಗೂ ಬೀಳ ಲಾರೆವು. ಮೊದಲು ಈ ಅನಾಗರಿಕರಿಗೆ ಒಳ್ಳೆಯ ರೀತಿಯಲ್ಲಿ ಹೇಳಿ ನೋಡುತ್ತೇನೆ. ಸಂಧಾನವಿಲ್ಲದೆ ಸಂಗ್ರಾಮ ಕೂಡದು. ಕೇಳದೇ ಹೋದರೆ, ಎಲ್ಲ ರನ್ನೂ, ಹೆಣ್ಣುಗಳನ್ನೂ ಮಕ್ಕಳನ್ನೂ ಬಿಟ್ಟು, ಹುಲ್ಲು ಹರಿದುಬಿಡೋಣ" ಎಂದ ಸಿದ್ಧಸಾಧಕ.

ಅಷ್ಟು ಹೊತ್ತಿನವರೆಗೂ ನರಭಕ್ಷಕರ ಪೂಜಾರಿ ಮುದುಕ, ದೇವಿಯ ಆವೇಶ ಬರಿಸಿಕೊಳ್ಳುವವನಂತೆ ಕಣ್ಣುಮುಚ್ಚಿ ಆಚೆಗೂ ಈಚೆಗೂ ಓಲಾಡುತ್ತಿದ್ದವನು, ದಿಡುಕ್ಕನೆ ಅಷ್ಟೆತ್ತರ ಹಾರಿ "ಓಂ! ಕಾಡಮ್ಮ ತಾಯಿ!" ಎಂದು ದೊಡ್ಡದಾಗಿ ಆರ್ಭಟಿಸಿ, "ಹಸಿವೆ! ಹಸಿವೆ! ಎಲೋ! ಕಾಡಮ್ಮಾತಾಯಿ ನಮ್ಮ ಆಹಾರವಾಗಿ ಕಳಿಸಲ್ಪಟ್ಟ ಮಾನವರೇ! ಹಾಗೆ ನೋಡುವಿರೇನು? ನಡೆಯಿರಿ ಕಾಡಮ್ಮಾತಾಯಿಯ ಆಲಯಕ್ಕೆ. ಅಲ್ಲಿ ಕಾಡಪ್ಪ ಕಾಡಮ್ಮರಿಗೆ ನಿಮ್ಮ ನೈವೇದ್ಯವಾಗಬೇಕು. ಆಮೇಲೆ ನಾವು ತಿನ್ನುವುದು! ಹೂಂ! ಮಹಾ ಪೂಜೆಗೆ ತಯಾರಾಗಲಿ! ಕರೆದೊಯ್ಯಿ ರೋಯ್ ಇವರನ್ನು!" ಎಂದನು.

ಸಿದ್ಧಸಾಧಕನು ಸ್ವಲ್ಪವೂ ಹೆದರದೆ ಶೂಲವನ್ನು ಎತ್ತಿಹಿಡಿದು, "ಓಹೋಯ್! ನರಮಾಂಸ ಭಕ್ಷಕರೇ, ನೀವು ನಮ್ಮನ್ನು ತಪ್ಪಾಗಿ ತಿಳಿದಿದ್ದೀರಿ. ನಿಮ್ಮ ಆಹಾರ ಕ್ಕಾಗಿ ಯಾವ ಕಾಡಪ್ಪ ಕಾಡಮ್ಮಂದಿರೂ ನಮ್ಮನ್ನು ಇಲ್ಲಿಗೆ ಕಳುಹಿಸಲಿಲ್ಲ. ಆಕಾಶದಲ್ಲಿ ಹಾರುವ ಹಂಸ ರಥದಿಂದ ಜಾರಿಬಿದ್ದ ನಮ್ಮವರನ್ನು ಹುಡುಕುತ್ತಾ ಬಂದವರು ನಾವು. ಅವರಲ್ಲೊಬ್ಬ ಮಾಯಾ ಸರೋವರೇಶ್ವರ ಎಂಬವನು ಸಿಕ್ಕಿದ್ದಾನೆ. ಇನ್ನು ನಮ್ಮ ಪಾಡಿಗೆ ನಾವು ಹೋಗುತ್ತೇವೆ. ವೃಥಾ ಗಲಭೆ ಮಾಡದೆ ಬುದ್ಧಿ ತಂದುಕೊಂಡು ನಿಮ್ಮ ದಾರಿ ಹಿಡಿದು ಹೋಗಿಬಿಡಿ. ನಿಮಗೂ ನಮಗೂ ಯಾವ ತಕರಾರೂ ಇಲ್ಲ." ಎಂದನು.

"ಅದೆಲ್ಲಾ ನಡೆಯದು. ನಮ್ಮ ದೇವರು ಕಳುಹಿಸಿದವರೇ ನೀವುಗಳು. ನಿಮ್ಮನ್ನು ಬಿಟ್ಟರೆ ನಮ್ಮ ಹಸಿವೆಗೇನು ದಾರಿ? ಎಷ್ಟೋ ದಿನಗಳಿಂದ ತಿನ್ನಲೇನೂ ಸಿಕ್ಕದೆ ಉಪವಾಸದಲ್ಲಿದ್ದೇವೆ. ಸಮಯಕ್ಕೆ ಸಿಕ್ಕಿದ ಆಹಾರವನ್ನು ಬಿಟ್ಟುಬಿಡಲು ನಾವೇನೂ ಮುಟ್ಠಾಳರಲ್ಲ," ಎಂದ ಹೆಬ್ಬುಲಿಹೆಗ್ಗ ಈಟಿಯನ್ನು ಝುಳಪಿಸುತ್ತ.

ನರಭಕ್ಷಕ ಪೂಜಾರಿ ಮಾಯಾಸರೋವರೇಶ್ವರನನ್ನು ನೋಡಿ, "ಎಲೋ ಮಾಯಾಸರೋವರೇಶ್ವರನೆಂದರೆ ನೀನೇನಾ? ನೀನು ಹೇಳು. ನಮ್ಮ ಕಾಡಮ್ಮಾ ತಾಯಿ ನಿನ್ನನ್ನು ಆಕಾಶದಿಂದ ನಾವು ಮಾಂಸ ಕುದಿಸುವ ಹಂಡೆಯೊಳಗೆ ಹಾಕಿದಳೋ ಇಲ್ಲವೋ? ನೀನು ಸರಿಯಾಗಿ ಅದರೊಳಗೆ ಬಿದ್ದವತಾನೇ? ನಿಜ ಮರೆಮಾಚದೆ ಹೇಳು" ಎಂದನು.

ಮಾಯಾಸರೋವರೇಶ್ವರನು ಏನೂ ಹೇಳಲಿಲ್ಲ. ಅಷ್ಟರಲ್ಲಿ ಸಿದ್ಧಸಾಧಕನ ಸನ್ನೆಯಂತೆ ನರವಾನರವು ಹೆಬ್ಬುಲಿಹೆಗ್ಗನನ್ನು ಎರಡು ಕೈಗಳಿಂದ ಅಪ್ಪಿಹಿಡಿದು, ಮೇಲಕ್ಕೆ ಎತ್ತಿತು. ಮಾಯಾಸರೋವರೇಶ್ವನು ಏರಿಕೊಂಡಿದ್ದ ಜಲಗ್ರಹ ಆನೆ ಒಮ್ಮೆಗೇ ಮುಂದೆ ಹಾರಿ ಸೊಂಡಿಲುಚಾಚಿ ಪೂಜಾರಿಯ ಸೊಂಟವನ್ನು ಸುತ್ತಿ ಹಿಡಿದು ಎತ್ತಿ ಬೀಸತೊಡಗಿತು. ಪೂಜಾರಿ ಕೆಟ್ಟದ್ವನಿಯಿಂದ ಕಿರಿಚುತ್ತಾ, ಮಧ್ಯ ಮಧ್ಯ, "ಬಿಡಬೇಡ್ರೋ! ಕೈಗೆ ಸಿಕ್ಕಿದ ಆಹಾರವನ್ನು ಬಿಡಬೇಡಿ. ಇದು ಕಾಡಮ್ಮಾತಾಯಿ ನಿಮ್ಮ ಬಲವನ್ನು ಪರೀಕ್ಷೆ ಮಾಡ್ತಾಳೆ! ಮನುಷ್ಯರನ್ನು ಈಟಿಗಳಿಂದ ಚುಚ್ಚಿರೋ! ಕೊಲ್ಲಿರೋ! ಹಂಡೆಯೊಳಗೆ ಹಾಕಿ ಒಬ್ಬೊಬ್ಬರನ್ನೇ ಬೇಯಿಸಿ ಬೇಯಿಸಿ ತೆಗೆಯಿರಿ. ಬಿಡಬೇಡಿರಿ!" ಎಂದು ಕೂಗಿ ಕೂಗಿ ಆಜ್ಞೆ ಮಾಡಿದನು.

"ಹೂಂ! ಇನ್ನು ಲಾಭವಿಲ್ಲ. ಮಾರಾಮಾರಿ ಆಗಿ ಹೋಗಲಿ. ಹೇ ಜಲವೃಕಾ! ತೋರಿಸು ನಿನ್ನ ಪ್ರತಾಪ! ಈ ನರಭಕ್ಷಕರನ್ನು ನಿನ್ನ ಕಲ್ಲಿನ ಗದೆಯಿಂದ ಪುಡಿ ಮಾಡು. ಒಬ್ಬರನ್ನೂ ಬಿಡಬೇಡ." ಎಂದು ತನ್ನ ಹೊಸ ಬಂಟ ಜಲವೃಕನಿಗೆ ಹೇಳಿದನು ಸಿದ್ಧಸಾಧಕ. "ಸಿದ್ಧಸಾಧಕ ದೊರೆಗಳಿಗೆ ಜಯವಾಗಲಿ!"



ಎಂದು ಗರ್ಜಿಸಿ ಜಲವೃಕ ರಾಕ್ಷಸನು ಕಲ್ಲಿನ ಗದೆಯನ್ನೆತ್ತಿ ನರಭಕ್ಷಕರ ಮೇಲೆ ಮೂರ್ಖವಾಗಿ ಬಿದ್ದನು. ಹಸಿವೆಯ ತೀವ್ರತೆಯಲ್ಲಿ ಜೀವದಾಶೆಬಿಟ್ಟಿದ್ದ ನರಭಕ್ಷಕರು ಅವನನ್ನು ಎದುರಿಸಿ ತಮ್ಮ ಬಲವನ್ನು ತೋರಿಸ ತೊಡಗಿದರು. ಜಲವೃಕ ರಾಕ್ಷಸನು ಕೈಗೆ ಸಿಕ್ಕ ನರಭಕ್ಷಕರನ್ನು ಎಲ್ಲೆಂದರಲ್ಲಿ ಹೊಡೆಯುತ್ತಿರಲು, ನರಭಕ್ಷಕರು ಅವನನ್ನು ಈಟಿಗಳಿಂದ ತಿವಿಯಲು ನೋಡುತ್ತ, ತಮ್ಮ ಕೂಗಾಟ ಚೀರಾಟಗಳಿಂದ ಅರಣ್ಯವೇ ಪ್ರತಿಧ್ವನಿಸುವಂತೆ ಮಾಡ ತೊಡಗಿದರು.

ಸಿದ್ಧಸಾಧಕನು ತನ್ನ ಹೊಸ ಬಂಟನಾದ ಜಲವೃಕನು ಅಷ್ಟು ಮಂದಿ ನರಭಕ್ಷಕರ ಟೋಳಿಯನ್ನು ಎದುರಿಸಿ ಹೋರಾಡುವ ಧೈರ್ಯ ಸಾಮರ್ಥ್ಯಗಳನ್ನು ನೋಡಿ, "ಭೇಷ್! ಜಲವೃಕಾ! ನೀನು ಪೌರುಷವುಳ್ಳವನೇ! ಮಹಾ ಧೈರ್ಯಶಾಲಿ ಕೂಡಾ. ನಾನೂ ನಿನಗೆ ಸಹಾಯಕನಾಗಿ ಬರುತ್ತೇನೆ" ಎಂದು ಕೂಗಿ ಹೇಳಿ, ನರವಾನರದ ಕೈಯಲ್ಲಿ ಸಿಕ್ಕಿ ಗುಂಜಿಕೊಳ್ಳಲು ಪ್ರಯತ್ನಿಸುವ ಹೆಬ್ಬುಲಿಹೆಗ್ಗನನ್ನು ದೂರ ಬೀಸಿ ಒಗೆಯಿಸಿ, "ಜೈ! ಮಹಾಕಾಳಾ!" ಎಂದು ಗರ್ಜಿಸುತ್ತ, ನರಭಕ್ಷಕರ ಮೇಲೆ ನರವಾನರವನ್ನು ಧುಮುಕಿಸಿದನು. ದೂರ ಬಿದ್ದ ಹೆಬ್ಬುಲಿಹೆಗ್ಗ ನರಳುತ್ತಾ, ಎದ್ದು ಬರಲು ಹೆಣಗುತ್ತಿದ್ದನು. ಅಲ್ಲಿಂದಲೇ ಕೂಗಿ ಆಜ್ಞೆ ಮಾಡುತ್ತಿದ್ದನು.

ಭಾರೀ ಮೂರ್ಖಯುದ್ಧ ಪ್ರಾರಂಭವಾಯಿತು. ಒಂದು ನಿಮಿಷ ಕೂಡಾ ಆಗಿರಲಿಕ್ಕಿಲ್ಲ, ಅಷ್ಟರಲ್ಲಿ ಹತ್ತು ಮಂದಿ ಅಶ್ವೀಕರು ವೇಗದಿಂದ ಅಲ್ಲಿಗೆ ಓಡಿ ಬರುವುದು ಕಾಣಿಸಿತು.

"ಹೋರಾಡ ಬೇಡಿರೋ! ಎಲ್ಲರೂ ಹಾಗೆ ಹಾಗೇ ನಿಲ್ಲಿರಿ! ಇದು ಹಿರಣ್ಯಪುರ ಮಹಾರಾಜರು ಕನಕಾಕ್ಷರಾಜರ ಆಜ್ಞೆ!" ಎಂದು ಅಶ್ವೀಕರು ಗಟ್ಟಿಯಾಗಿ ಕೂಗಿ ಹೇಳಿದರು.

ಅದನ್ನು ಕೇಳಿ ಮಾರಾಮಾರೀ ಮಾಡಿಕೊಂಡಿದ್ದ ನರಭಕ್ಷಕರೂ, ಸಿದ್ಧಸಾಧಕನೂ ಗಕ್ಕನೆ ನಿಂತು ಆಶ್ಚರ್ಯದಿಂದ ಅವರನ್ನು ನೋಡತೊಡಗಿದರು. ಮಾಯಾ ಸರೋವರೇಶ್ವರನು ತುಂಬಾ ಹೆದರಿ, "ಮಕರಕೇತೂ, ನಾವಿಲ್ಲಿರಬಾರದು! ವೇಗವಾಗಿ ನಮ್ಮ ಮಾಯಾ ಸರೋವರಕ್ಕೆ ಹೋಗಿಬಿಡೋಣ! ಬಾ ಬೇಗ!" ಎಂದನು.

ಮಕರಕೇತು ಉತ್ತರ ಕೊಡುವುದರೊಳಗೆ, ಆ ಮಾತನ್ನು ಕೇಳಿದ ಸಿದ್ಧಸಾಧಕನು ಕಣ್ಣು ಕೆಂಪು ಮಾಡಿ, "ಎಲೋ ಕಳ್ಳ ಸರೋವರದ ಮಾಯೇಶ್ವರಾ! ನೀನು ಎಲ್ಲಿಗಾದರೂ ಓಡಲು ಪ್ರಯತ್ನಿಸಿದರೆ, ಅದು ನಿನಗೆ ಕೇಡುಕಾಲ! ಜಾಗ್ರತೆ! ಇಲ್ಲೇ ಇರು!" ಎನ್ನುತ್ತಾ ಶೂಲವನ್ನು ಅವನ ಗುಂಡಿಗೆಗೆ ಆನಿಸಿದನು. (ಇನ್ನೂ ಇದೆ)






ರಾಮನು ಸೊಗಸಾಗಿ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ, ಉತ್ತರ ದಿಕ್ಕಿನಲ್ಲಿದ್ದ ಗಂಧರ್ವರು ಸ್ವೇಚ್ಛೆಯಿಂದ ರಾಮನನ್ನು ಧಿಕ್ಕರಿಸಿ ಪ್ರಜೆಗಳನ್ನು ನಾನಾ ವಿಧವಾಗಿ ಪೀಡಿಸತೊಡಗಿದರು. ಅದನ್ನು ತಿಳಿದು ರಾಮನು ಭರತನನ್ನು ಗಂಧರ್ವರೊಂದಿಗೆ ಯುದ್ಧಕ್ಕೆ ಕಳುಹಿಸಿದನು.

ಭರತನು ಸೇನೆಯೊಂದಿಗೆ ಹೋಗಿ ಗಂಧರ್ವರೊಂದಿಗೆ ದೊಡ್ಡ ಯುದ್ಧವನ್ನು ಮಾಡಿ ಅವರನ್ನು ಅಡಗಿಸಿದನು. ಗಂಧರ್ವ ಪೀಡೆ ಪರಿಹಾರವಾಗಿ ಪ್ರಜೆಗಳು ಸುಖಪಟ್ಟರು.

ಅದಾದ ಮೇಲೆ ವಾಯುವ್ಯ ದಿಕ್ಕಿನಲ್ಲಿ ಲವಣಾಸುರನೆಂಬ ರಾಕ್ಷಸನು ಪ್ರಳಯಕಾಲದ ರುದ್ರನಂತೆ ತಾನೇ ಸಾರ್ವಭೌಮನೆಂಬಂತೆ ವಿಜೃಂಭಿಸತೊಡಗಿದನು. ರಾಮನು ಶತ್ರುಘ್ನನನ್ನು ಲವಣಾಸುರ ಸಂಹಾರಕ್ಕೆ ನಿಯಮಿಸಿ, ಅನೇಕ ದಿವ್ಯಾಸ್ತ್ರಗಳನ್ನು ಅವನಿಗೆ ಕೊಟ್ಟನು. ರಾಕ್ಷಸ ಮಾಯೆಗಳಿಗೆ ತಕ್ಕ ಪ್ರತಿಕ್ರಿಯೆ ಮಾಡಲು ಅಷ್ಟುಮಾತ್ರ ಸಾಲದೆಂದು ತೋರಿತು. ವಿಭೀಷಣನೂ ಜತೆಯಲ್ಲಿದ್ದರೆ ಒಳ್ಳೆಯದೆನಿಸಿ, ರಾಮನು ಹನುಮಂತನ ಮೂಲಕ ಲಂಕೆಗೆ ಸುದ್ದಿ ಕಳುಹಿಸಿದನು. ಲಂಕೆಯಿಂದ ವಿಭೀಷಣನು ರಾಕ್ಷಸ ವೀರರನ್ನು ಕರೆದುಕೊಂಡು ಬಂದನು. ಶತ್ರುಘ್ನನು ತನ್ನ ಸೇನೆಗಳೊಂದಿಗೆ ರಾಕ್ಷಸ ಸೇನೆಯನ್ನೂ ಕೂಡಿಸಿ ವಿಭೀಷಣನ ಜತೆಯಲ್ಲಿ ಲವಣಾಸುರನೊಂದಿಗೆ ಯುದ್ಧಕ್ಕೆ ಹೊರಟನು.

ಲವಣಾಸುರನೊಂದಿಗೆ ಘೋರಯುದ್ಧವೇ ನಡೆಯಿತು. ಶತ್ರುಘ್ನನು ವಿಷ್ಣುವಿನ ಸುದರ್ಶನ ಚಕ್ರದಂತೆ ವಿಜೃಂಭಿಸಿ ಲವಣಾಸುರನ ಸೇನೆಗಳನ್ನು ಹತಮಾಡಿದನು.

ಆಗ ನಡೆದ ಮಹಾ ಯುದ್ಧದಲ್ಲಿ ವಿಭೀಷಣನ ರಾಕ್ಷಸ ಸೈನ್ಯವೂ ದೊಡ್ಡ ಪರಾಕ್ರಮವನ್ನು ಪ್ರದರ್ಶಿಸಿತು. ಶತ್ರುಘ್ನನ ಕೈಯಿಂದ ಲವಣಾಸುರನು ಸತ್ತುಬಿದ್ದನು. ಹೀಗೆ ವಿಜಯಶಾಲಿಯಾಗಿ ಶತ್ರುಘ್ನನು ಸೇನೆಗಳೊಂದಿಗೆ ಅಯೋಧ್ಯೆಗೆ ಹಿಂದಿರುಗಿದನು.

೪೦. ಶತಕಂಠ ರಾವಣನ ವಧೆ



40-1



ಒಂದು ದಿನ ರಾಮನು ಸೀತೆಯೊಂದಿಗೆ ಸಭೆ ನಡೆಸಿಕೊಂಡಿದ್ದಾಗ, ರಾಮನ ಸಿಂಹಾಸನದ ಮುಂದೆ ಹನುಮಂತನು ಕುಳಿತಿದ್ದನು. ಭರತ, ಲಕ್ಷ್ಮಣ, ಶತ್ರುಘ್ನ, ಸುಗ್ರೀವ, ಅಂಗದ, ನಳ, ನೀಲ, ಜಾಂಬವಂತ, ವಿಭೀಷಣಾದಿಗಳೂ, ವಸಿಷ್ಠ, ವಿಶ್ವಾಮಿತ್ರ ಜಾಬಾಲಿ ಮೊದಲಾದವರೂ ತಕ್ಕ ತಕ್ಕ ಆಸನಗಳಲ್ಲಿ ಸಭೆಯನ್ನು ಅಲಂಕರಿಸಿಕೊಂಡಿದ್ದರು. ಸಾಮಂತರೂ ಪುರಪ್ರಮುಖರೂ ಮಂಡಿಸಿದ್ದರು.

ಅಂತಹ ರಾಮನ ಸಭೆಗೆ ಅಗಸ್ತ್ಯ ಮಹಾಮುನಿ ಆಗಮಿಸಿದನು. ರಾಮನು ಅವನಿಗೆ ಅರ್ಘ್ಯ ಪಾದ್ಯಾದಿಗಳನ್ನಿತ್ತು ನಮಸ್ಕರಿಸಿ, ಆತಿಥ್ಯಗಳನ್ನಿತ್ತು ಕ್ಷೇಮ ಸಮಾಚಾರಗಳನ್ನು ಕುರಿತು ಕೇಳಿದನು.

ಅದಕ್ಕೆ ಅಗಸ್ತ್ಯನು, "ರಾಮಾ, ದುಷ್ಟ ಶಿಕ್ಷಣ, ಶಿಷ್ಟ ರಕ್ಷಣ ಮಾಡತಕ್ಕ ಮಹಾರಾಜನಾಗಿ ನೀನಿರುವಾಗ ನಮ್ಮ ಕ್ಷೇಮಕ್ಕೆ ಏನು ಕೊರತೆ ಇದ್ದೀತು? ನೀನು ದಶಕಂಠನಾದ ರಾವಣನನ್ನು ಕೊಂದು ದೊಡ್ಡ ಕೀರ್ತಿಯನ್ನು ಸಂಪಾದಿಸಿರುವುದೇನೋ ನಿಜ. ಈಗ ನಿನಗೆ ಇನ್ನೊಂದು ಆಪತ್ತು ಒದಗಲಿದೆ. ಇಕ್ಷು ಸಮುದ್ರದಾಚೆಗೆ ಮಾಯಾ ಲಂಕಾ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಶತಕಂಠರಾವಣನೆಂಬ ರಾಕ್ಷಸರ ರಾಜನು ನಿನ್ನ ಸಂಗತಿ ತಿಳಿದು, ನಿನ್ನನ್ನು ಜಯಿಸಬೇಕೆಂಬ ಉದ್ದೇಶದಿಂದ ಹೊರಡಲಿದ್ದಾನೆ. ಇದನ್ನು ತಿಳಿದು ನಿನ್ನನ್ನು ಎಚ್ಚರಿಸಲಿಕ್ಕಾಗಿಯೇ ನಾನು ಬಂದೆ" ಎಂದನು.

ರಾಮನು ಆಶ್ಚರ್ಯಪಟ್ಟು, ಅವನು ಯಾರು ಎಂಥವನೆಂಬುದನ್ನು ವಿವರಿಸಿ ಹೇಳಬೇಕೆಂದು ಅಗಸ್ತ್ಯನನ್ನು ಕೇಳಿದನು. ಅಗಸ್ತ್ಯನು ಹೀಗೆಂದನು:

"ಕಶ್ಯಪ ಪ್ರಜಾಪತಿಗೆ ವಸು ಎಂಬವಳು ಹೆಂಡತಿಯಾಗಿದ್ದಳು. ಅವಳು ಅಸುರ ಸಂಧ್ಯವೇಳೆಯಲ್ಲಿ ಗರ್ಭಿಣಿಯಾಗಿ ತುಂಬ ವಿಕೃತಾಕಾರನಾದ ಶತಕಂಠನನ್ನು ಹಡೆದಳು. ಅವನು ಬ್ರಹ್ಮದೇವನನ್ನು ಕುರಿತು ದಾರುಣವಾದ ತಪಸ್ಸು ಮಾಡಿದನು. ಬ್ರಹ್ಮನು ಸಂತುಷ್ಟನಾಗಿ ಶತಕಂಠನ ಮುಂದೆ ಪ್ರತ್ಯಕ್ಷನಾಗಲು, ಇಂದ್ರಾದಿ ದೇವತೆಗಳನ್ನು ಜಯಿಸುವ ಶಕ್ತಿ ತನಗೆ ಬರಬೇಕೆಂದು ಕೇಳಿ ವರವನ್ನು ಪಡೆದನು. ಅವನ ಮಾಯಾ ಲಂಕೆಯಲ್ಲಿ ಹೊರತು ಮತ್ತೆಲ್ಲಿಯೂ ಯಾವ ಗಂಡುಗಲಿಗಳಿಂದಲೂ ಅವನನ್ನು ಕೊಲ್ಲಲು ಸಾಧ್ಯವಿಲ್ಲ. ಈ ಬಗೆಯ ವರಗಳ ಬಲದಿಂದ ಅವನು ಉನ್ಮತ್ತನಾಗಿ ಮೂರು ಲೋಕಗಳನ್ನೂ ಜಯಿಸುವ ಆಲೋಚನೆಯಲ್ಲಿದ್ದಾನೆ. ಅವನನ್ನು ಹತಮಾಡದಿದ್ದರೆ ಧರ್ಮಕ್ಕೆ ಉಳಿಗಾಲವಿಲ್ಲ."

ರಾಮನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಅವನ ಬಲಪರಾಕ್ರಮಗಳು ಎಷ್ಟರ ಮಟ್ಟಿನದು? ಅವನಿಗಿರುವ ಬೇರೇನಾದರೂ ವಿಶೇಷ ಶಕ್ತಿ ಯಾವುದು?" ಎಂದು ಕೇಳಿದನು

"ಅವನ ಬಲಪರಾಕ್ರಮಗಳು ಎಷ್ಟೇ ಇರಲಿ. ನಿನ್ನ ಬಾಣಗಳಿಗೆ ಅಸಾಧ್ಯವಾದುದು ಯಾವುದೂ



40-2

ಇಲ್ಲ. ಮುಖ್ಯ ಅವನು ದಶಕಂಠ ರಾವಣನಿಗಿಂತ ಹತ್ತು ಪಾಲು ಹೆಚ್ಚು ಪ್ರತಾಪ ಉಳ್ಳವನು. ಅವನ ಕಂಠಸ್ವರವೂ ರಾವಣನಿಗಿಂತ ಹತ್ತು ಪಾಲುದೊಡ್ಡದು. ಅವನ ರಾಜ್ಯಕ್ಕೆ ಹೋಗಲು ದೇವತೆಗಳಿಗೂ ಸಾಧ್ಯವಿಲ್ಲ. ಇಂದ್ರನಿಗೂ ಅಷ್ಟು ಭಯ! ಅವನನ್ನು ಹೇಗೆ ಕೊಲ್ಲಬೇಕೆಂಬುದನ್ನು ನಿನಗೆ ನಾನು ಹೇಳಬೇಕಾಗಿಲ್ಲ." ಎಂದನು ಅಗಸ್ತ್ಯ.

ಅಗಸ್ತ್ಯನು ರಾಮನಿಂದ ಬೀಳುಗೊಂಡು ಹೊರಟುಹೋದ ಮೇಲೆ, ರಾಮನು ತನ್ನ ತಮ್ಮಂದಿರೊಂದಿಗೆ, "ನಾನು ಯುದ್ಧದಲ್ಲಿ ರಾವಣ ಕುಂಭಕರ್ಣಾದಿ ಮಹಾ ರಾಕ್ಷಸರನ್ನು ಕೊಂದು ಬಳಲಿದ್ದೇನೆ. ಲಕ್ಷ್ಮಣನು ಕೂಡಾ ನನ್ನ ಜತೆಯಲ್ಲಿ ನನ್ನಷ್ಟೇ ಶ್ರಮಿಸಿ ಬಳಲಿದ್ದಾನೆ. ಭರತನು ಗಂಧರ್ವರೊಂದಿಗೂ, ಶತ್ರುಘ್ನನು ಲವಣಾಸುರನೊಂದಿಗೂ ಯುದ್ಧಮಾಡಿ ಬಳಲಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಎಲ್ಲಿಯೋ ಸಮುದ್ರಗಳ ಆಚೆಗಿರುವ ಶತಕಂಠರಾವಣನನ್ನು ಕೊಂದುಬರಲು ಯಾವನನ್ನು ನಿಯಮಿಸಲಿ? ಒಂದೆ ನೂರು ಯೋಜನ ಸಮುದ್ರ ದಾಟುವುದೇ ಬಹಳ ಕಷ್ಟವಾಯಿತು. ಈಗ ಸಾವಿರ ಯೋಜನ ದೂರ ದಾಟಬೇಕು" ಎಂದುಕೊಂಡು ರಾಮನು ಸ್ವಲ್ಪ ವಿಚಾರದಲ್ಲಿ ಬಿದ್ದನು.

ಆಗ ರಾಮನ ದೃಷ್ಟಿ ಇದಿರಿನಲ್ಲಿ ಕುಳಿತಿದ್ದ ಹನುಮಂತನ ಮೇಲೆ ಬಿದ್ದಿತು. ಕೂಡಲೇ ರಾಮ, "ಹನುಮಾನ್, ಈ ಕೆಲಸಕ್ಕೆ ಸಹಾಯ ಮಾಡಲು ನೀನೇ ತಕ್ಕವನು. ನೀನು ಯಾರೆಂದು ನನಗೆ ಗೊತ್ತು. ಏಕಪಾದರುದ್ರ ನೀನು. ಎಲ್ಲವನ್ನೂ ಕೇಳುತ್ತ ಏನೂ ತಿಳಿಯದವನಂತೆ ಸುಮ್ಮನೆ ಕುಳಿತಿರುವೆಯಲ್ಲಾ?" ಎಂದನು.

ಅದಕ್ಕೆ ಹನುಮಂತನು ವಿನಯದಿಂದ "ರಾಮಾ! ನಿನಗೆ ಈ ರಾಕ್ಷಸರೆಲ್ಲ ಒಂದು ಲೆಕ್ಕವೆ? ನನ್ನ ಮೇಲೆ ಏರಿಕೊಂಡು ಆ ರಾಕ್ಷಸನಿರುವ ದ್ವೀಪಕ್ಕೆ ಹೋಗಿ



ಲೀಲಾಜಾಲವಾಗಿ ಅವನನ್ನು ಕೊಂದುಬಿಡುವುದೇನು ಕಷ್ಟ?" ಎಂದನು.

ರಾಮನು ಹನುಮಂತನನ್ನು ಆಲಿಂಗಿಸಿಕೊಂಡು, "ನಿನ್ನ ಶೌರ್ಯ ಪರಾಕ್ರಮಗಳಿಗೆ ತಕ್ಕ ಮಾತನ್ನೇ ಹೇಳಿದೆ. ಇಂತಹ ಮಾತು ಬೇರೊಬ್ಬನ ಬಾಯಿಯಿಂದ ಬಾರದು" ಎಂದನು.

ಇದನ್ನೆಲ್ಲಾ ನೋಡಿಕೊಂಡಿದ್ದ ಸೀತೆ ರಾಮನೊಂದಿಗೆ, "ರಾಮಾ, ಹನುಮಂತನನ್ನು ಏಕಪಾದ ರುದ್ರನೆಂದು ಹೇಳಲು ಕಾರಣವೇನು? ರುದ್ರನು ಕೋತಿರೂಪವನ್ನು ಧರಿಸಿದನೇಕೋ?" ಎಂದು ತನ್ನ ಸಂದೇಹವನ್ನು ಕೇಳಿದಳು.

ಆದಕ್ಕೆ ರಾಮನು ಹೀಗೆಂದನು:

"ಒಂದು ಕಾಲದಲ್ಲಿ ರುದ್ರಾಂಶದಿಂದ ಅವತರಿಸಿದ ಏಕಪಾದ ರುದ್ರನು ಬ್ರಹ್ಮಾಂಡವನ್ನು ಕಾಪಾಡಿಕೊಂಡಿದ್ದನು. ರುದ್ರಗಣಗಳು ಅವನ ಸೇವೆ ಮಾಡಿಕೊಂಡಿದ್ದುವು. ಒಂದು ದಿನ ಏಕಪಾದ ರುದ್ರನು



ತನ್ನ ಧ್ಯಾನ ಶಕ್ತಿಯಿಂದ ಮಹಾವಿಷ್ಣುವಿನ ರೂಪವನ್ನು ನೋಡಿ, ಬ್ರಹ್ಮಾಂಡ ಪರಿಪಾಲನೆಯ ಕಾರ್ಯವನ್ನು ವಿಷ್ಣುವಿಗೆ ಒಪ್ಪಿಸಿ, ಅಲ್ಲಿಂದ ಹೊರಟು ವಿಶ್ವವನ್ನೆಲ್ಲಾ ತಿರುಗಿ ಭೂಲೋಕಕ್ಕೆ ಬಂದು ಶಿವನಲ್ಲೇ ಐಕ್ಯನಾದನು. ಆ ಸಮಯದಲ್ಲಿ ಶಿವನ ಅಂಶದಿಂದ ಈ ಹನುಮಂತನು ಹುಟ್ಟಿದ್ದಾನೆ.''

ಸೀತೆಗೆ ತೃಪ್ತಿಯಾಯಿತು. ಆಮೇಲೆ ರಾಮನು ಶತಕಂಠ ರಾವಣನ ಮೇಲೆ ತಾನೇ ಯುದ್ಧಕ್ಕೆ ಹೊರಡಲು ಸಿದ್ಧನಾದನು. ಅವನೊಂದಿಗೆ ಸೀತೆಯೂ ಬರುವೆನೆಂದಳು. ಲಕ್ಷ್ಮಣ, ಭರತ, ಶತ್ರುಘ್ನರೂ, ಸುಗ್ರೀವ, ವಿಭೀಷಣರೂ, ಸೈನ್ಯವೂ ಯುದ್ಧಕ್ಕೆ ಸಿದ್ಧರಾಗಿ ಹೊರಟರು.

ರಾಮನು ಹನುಮಂತನ ಮೇಲೆ ದೃಷ್ಟಿ ಹರಿಸಿದನು. ಹನುಮಂತನು ವಿಶ್ವರೂಪ ಧರಿಸಿ ಆಕಾಶದಷ್ಟೆತ್ತರ ಬೆಳೆದು ದಿಕ್ಕುಗಳನ್ನು ತುಂಬಿಸಿ ನಿಂತಿದ್ದನು. ಆಗಿನ ಅವನ ಪೂರ್ತಿ ರೂಪವನ್ನು ನೋಡಲು ಯಾರಿಗೂ ಸಾಧ್ಯವಿರಲಿಲ್ಲ. ಅಂತಹ ಹನುಮಂತನನ್ನು ನೋಡಿ ಎಲ್ಲರೂ ದಿಗ್ಭ್ರಾಂತರಾದರು. ರಾಮನು ತಲೆ ದೂಗಿದನು.

ತರುವಾಯ ಹನುಮಂತನು ಭೂಮಿಯ ಕಡೆ ಬಾಗಿದನು. ಮೊದಲು ಅವನ ಬೆನ್ನಿನ ಮೇಲೆ ರಾಮನು ಸೀತೆಯನ್ನು ಏರಿಸಿ, ತಾನೂ ಏರಿ, ತನ್ನೊಂದಿಗೆ ಬರುವವರನ್ನೂ, ವಾನರರಾಕ್ಷಸ ಸೈನ್ಯಗಳನ್ನೂ ಏರಿಕೊಳ್ಳುವಂತೆ ಹೇಳಿದನು. ಹನುಮಂತನ ವಿಶೇಷ ಶಕ್ತಿಯಿಂದ ರಾಮನ ಸೇನೆಗಳಿಗೆ ನಡೆಯುವ ಪ್ರಯಾಸವಿಲ್ಲದೆ ಹೋಯಿತು.

ಅವರು ಹಾಯಾಗಿ ಹನುಮಂತನ ವಿಶಾಲವಾದ ಬೆನ್ನಿನ ಮೇಲೆ ಆಕಾಶಯಾನ ಮಾಡಿದರು. ಗಗನಮಾರ್ಗದಲ್ಲಿ ಸಾಗುತ್ತಿರುವ ಹನುಮಂತನು, ಹಾರುವ ಮೇರುಪರ್ವತದಂತೆ ಬ್ರಹ್ಮಾಂಡವಾಗಿ ಕಾಣಿಸಿದನು.

ಹೀಗೆ ಹನುಮಂತನು ವಿಶ್ವರೂಪದಿಂದ ಎಲ್ಲರನ್ನೂ ಹೊತ್ತುಕೊಂಡು ನಾಲ್ಕು ಸಮುದ್ರಗಳ ಮೇಲೆ ಹಾರಿ ಹೋಗುವಾಗ, ರಾಮನು ಸೀತೆಗೆ ಒಂದೊಂದು ಸಮುದ್ರವನ್ನು ತೋರಿಸುತ್ತ ವಿಶೇಷಗಳನ್ನು ಬಣ್ಣಿಸುತ್ತಾ ಹೋದನು. ಕಡೆಗೆ ತಿಕ್ತಸಮುದ್ರವನ್ನೂ ದಾಟಿ ಶತಕಂಠ ರಾವಣನ ಮಾಯಾಲಂಕೆ ಗೋಚರವಾಯಿತು.

ಆ ನಗರದ ಸುತ್ತಲೂ ಬಂಗಾರದ ಕೋಟೆಯಿದ್ದಿತು. ಹೀಗೆ ಆ ಸ್ಥಳಕ್ಕೆ ಬರಲು ಹನುಮಂತನಿಂದ ಸಾಧ್ಯವಾಯಿತೇ ಹೊರತು, ಬೇರೆಯಾರಿಗೂ ಸಾಧ್ಯವಾಗದು.

ಆ ಮಾಯಾ ಲಂಕೆಯಲ್ಲಿ ಸ್ವರ್ಗಲೋಕದ ನಂದನವನಕ್ಕೆ ಸಮಾನವಾದ ವನವನ್ನು ನೋಡಿ, ರಾಮನು ಅಲ್ಲಿ ಇಳಿಯುವಂತೆ ಹನುಮಂತನಿಗೆ ಹೇಳಿದನು. ರಾಮನ ಎಲ್ಲಾ ಸೇನೆಗಳೂ ಅಲ್ಲಿ ಇಳಿದುವು. ಆಮೇಲೆ ರಾಮನು ಸುಗ್ರೀವನೇ ಮೊದಲಾದವರೊಂದಿಗೆ, "ಇನ್ನು ತಡಮಾಡಬಾರದು. ನೀವು ಕೋಟೆಯೊಳಗೆ



40-4

ನುಗ್ಗಿ ಯುದ್ಧವನ್ನು ಪ್ರಾರಂಭಿಸಿರಿ. ಓಡಿ ಬರಲಿ ಶತಕಂಠರಾವಣ !" ಎಂದು ಹೇಳಿದನು.

ಆ ಕೂಡಲೇ ಸುಗ್ರೀವ, ಅಂಗದ, ವಿಭೀಷಣ ಮೊದಲಾದ ಮಹಾವೀರರು ತಮ್ಮ ಸೇನೆಗಳೊಂದಿಗೆ ಶತಕಂಠನ ಮೇಲೆ ಯುದ್ಧಕ್ಕೆ ಹೋದರು. ವಾನರ ಸೇನೆಯೂ ರಾಕ್ಷಸ ಸೇನೆಯೂ ಕೂಡಿ, ಕೋಟೆಯ ಸುತ್ತಲೂ ಇರುವ ಅಗಳ್ತೆಯನ್ನು ಮುಚ್ಚಿ ನೆಲ ಸಮ ಮಾಡಿ, ಕೋಟೆಯ ಗೋಡೆಗಳನ್ನು ಒಡೆದು. ಗೋಪುರಗಳನ್ನು ಕೆಡವಿ, ದ್ವಾರದ ಬಾಗಿಲುಗಳನ್ನು ಒದ್ದು ಮುರಿದು ಒಳಗೆ ನುಗ್ಗಿದರು.

ಆ ಕೋಟೆಯನ್ನು ರಕ್ಷಿಸುವ ಕಾಲಕೇಯರೆಂಬ ರಾಕ್ಷಸರಿಗೆ, ಈ ಕೋತಿಗಳೂ ರಾಕ್ಷಸರೂ ಹೀಗೆ ಬಂದು ಮುಗಿಬೀಳುವುದನ್ನು ನೋಡಿ ಆಶ್ಚರ್ಯ ವಾಯಿತು. "ಇವರೆಲ್ಲ ಎಲ್ಲಿಂದ ಬಂದರು ? ಈ ಪಟ್ಟಣವನ್ನು ಪಾಲಿಸುವುದು ಶತಕಂಠ ರಾವಣನೆಂದು ಇವರಿಗೆ ತಿಳಿಯದೇ ? ಇವರೆಲ್ಲ ಇನ್ನು ಜೀವದಿಂದ ಉಳಿಯುವುದುಂಟೇ ?" ಎಂದು ಅಂದುಕೊಳ್ಳು ತ್ತಿರುವಾಗಲೇ ಕೋಟೆಯನ್ನು ಪುಡಿಮಾಡಿ ವಾನರ ರಾಕ್ಷಸರು ಒಳಗೆ ನುಗ್ಗಿದ್ದರು.

ಒಮ್ಮೆಲೇ ಗಾಬರಿಯಾದ ಕಾಲಕೇಯರು ಬಗೆ ಬಗೆಯ ಆಯುಧಗಳನ್ನು ತೆಗೆದುಕೊಂಡು ವಾನರ ರಾಕ್ಷಸರ ಮೇಲೆ ಬಿದ್ದರು. ಅವರ ಏಟುಗಳಿಗೆ ತಾಳಿ ಕೊಳ್ಳಲಾಗದೆ ವಾನರರು ದೂರ ದೂರ ಓಡಿದರು. ವಿಭೀಷಣನು ವಾನರರನ್ನು ನಿಲ್ಲಿಸಿ ತನ್ನ ರಾಕ್ಷಸ ಸೇನೆ ಗಳನ್ನು ಉತ್ಸಾಹ ಪಡಿಸಿದನು. ಅವರೊಂದಿಗೆ ವಾನರರು ಕೂಡಾ ಹೊಸ ಉತ್ಸಾಹದಿಂದ ತಿರುಗಿ ಬಂದರು. ಕಾಲಕೇಯ ರಾಕ್ಷಸರಿಗೂ, ವಾನರ ರಾಕ್ಷಸರಿಗೂ ತೀವ್ರ ಯುದ್ಧ ಪ್ರಾರಂಭವಾಯಿತು.

ಆ ಸಮಯದಲ್ಲಿ ಶತಕಂಠ ರಾವಣನು ಶಿವಪೂಜೆ ಮಾಡುತ್ತಿದ್ದವನು. ಯುದ್ಧದ ಕೋಲಾಹಲವನ್ನು ಕೇಳಿದನು. ಅವನು ದ್ವಾರಪಾಲಕರನ್ನು ಕರೆದು "ಏನು ಗಲಾಟೆಯದು ?" ಎಂದು ಕೇಳಿದನು.

ದ್ವಾರಪಾಲಕರು ಅವನಿಗೆ ನಮಸ್ಕಾರ ಮಾಡಿ, 'ಸ್ವಾಮಿಾ, ಯಾವನೋ ರಾಜನು ಕೋತಿಯ



40-5



ಮೇಲೆ ಏರಿಕೊಂಡು ವಾನರ ಮತ್ತು ರಾಕ್ಷಸರ ಸೇನೆಯೊಂದಿಗೆ ಇಲ್ಲಿ ಬಂದು ಅತಿಕ್ರಮ ಪ್ರವೇಶ ಮಾಡಿದ. ನಮ್ಮ ಕಾಲಕೇಯರು ಅವರೊಂದಿಗೆ ಯುದ್ಧ ಮಾಡುತ್ತಿದ್ದಾರೆ. ಅದೇ ಕೋಲಾಹಲ" ಎಂದು ಬಿನ್ನವಿಸಿದರು.

ಶತಕಂಠನು ದ್ವಾರಪಾಲಕರನ್ನು ನೋಡಿ, "ನಿಮಗೆ ತಲೆಗಿಲೆ ಕೆಟ್ಟಿದೆಯೇ? ಯಾವನೋ ರಾಜನು ಕೋತಿಯ ಮೇಲೇರಿ ನನ್ನ ನಗರದ ಮೇಲೆ ಯುದ್ಧಕ್ಕೆ ಬಂದನೆಂದರೆ, ಯಾರಾದರೂ ನಕ್ಕಾರು. ದೇವತೆಗಳೇ ಇಲ್ಲಿಗೆ ಬರಲು ಹೆದರುವಾಗ ಮಾನವ ರಾಜ ವಾನರ ಸೇನೆಯೊಂದಿಗೆ ಬರುವುದುಂಟೇ? ರಾವಣಗೀವ ಅಲ್ಲವಷ್ಟೇ?" ಎಂದನು.

ಆಮೇಲೆ ಆ ಮಾತು ನಿಜವೆಂದೂ, ಹಾಗೆ ಬಂದವನು ಸಣ್ಣ ಲಂಕೆಯ ರಾವಣನನ್ನು ಕೊಂದ ರಾಮನೇ ಎಂದೂ ತಿಳಿದು, ಕ್ರೋಧಗೊಂಡನು. "ನಾನೇ ಹೋಗಬೇಕೆಂದಿರುವಾಗ, ಅವನೇ ಬಂದನೇ! ಒಳ್ಳೆಯದಾಯಿತು" ಎಂದುಕೊಂಡು ತನ್ನ ಸೇನೆಗೆ ಯುದ್ಧಕ್ಕೆ ಹೊರಡಲು ಆಜ್ಞೆಮಾಡಿ ರಣಭೇರಿಯನ್ನು ಮೊಳಗಿಸಿ, ತಾನೂ ಯುದ್ಧಕ್ಕೆ ಸಿದ್ಧನಾಗಿ ಹೊರಟನು.

ಶತಕಂಠನೇ ಯುದ್ಧಕ್ಕೆ ಬಂದನೆಂದು ತಿಳಿದು ರಾಮನೂ ಯುದ್ಧರಂಗಕ್ಕೆ ತೆರಳಿದನು. ತನ್ನ ಮುಂದೆ ನಿಂತ ಶತಕಂಠನ ಕಿರೀಟವನ್ನೂ, ಅಲಂಕಾರದ ಕಾಂತಿಯನ್ನೂ, ಅವನ ಶರೀರವನ್ನೂ, ಮದವನ್ನೂ ನೋಡಿ ರಾಮನು ಅದ್ಭುತವನ್ನು ನೋಡಿದಂತೆ ತಲೆ ದೂಗಿದನು.

ಅದನ್ನು ನೋಡಿ ಹನುಮಂತನು, "ಸ್ವಾಮಿ, ನೀನು ಅವನನ್ನು ನೋಡಿ ಆಶ್ಚರ್ಯ ಪಡುವುದುಂಟೆ? ನಿನ್ನ ಬಾಣಗಳ ಮುಂದೆ ಅವನೆಷ್ಟರವನು? ಬೇಗನೇ ಕೊಂದುಬಿಡು. ನೋಡು ಅವನ ಬಲವನ್ನು" ಎಂದು ಹೇಳಿ ಮುಂದಕ್ಕೆ ಓಡಿ ಹೋಗಿ ಶತಕಂಠರಾವಣನ ವಿಶಾಲವಾದ ಎದೆಯ ಮೇಲೆ ಒಂದು ಗುದ್ದು ಹಾಕಿದನು.

ಆ ಗುದ್ದಿನ ವೇಗಕ್ಕೆ ಶತಕಂಠನು ಕೆಳಗೆ ಬಿದ್ದು, ಕೂಡಲೇ ಎದ್ದು ಹನುಮಂತನನ್ನು ನೋಡಿ, "ಅರೆ! ನಿನ್ನ ಬಲವಾದರೂ ಎಷ್ಟುದು? ಎಲೋ ವಾನರನೇ! ಮೂರು ಲೋಕಗಳನ್ನೂ ನಡುಗಿಸುವಂಥವನಾದ ನನ್ನನ್ನು ಬರಿ ಮುಷ್ಟಿಯಿಂದ ಹೊಡೆದು ಬೀಳಿಸಿದೆಯಲ್ಲಾ! ನಾನು ಎಷ್ಟೋಕಡೆ ತಿರುಗಿದ್ದೇನೆ. ಎಷ್ಟೋ ದೇವತೆಗಳನ್ನು ಯುದ್ಧಗಳಲ್ಲಿ ಗೆದ್ದು ಇಷ್ಟರವಟ್ಟಿಗೆ ಆಗಿದ್ದೇನೆ. ನಿನ್ನ ಹಾಗೆ ಯಾರೂ ನನ್ನನ್ನು ಹೀಗೆ ಬೀಳಿಸಿದವರಿಲ್ಲ. ಇರಲಿ, ನಿನ್ನ ಮುಷ್ಟಿಯ ಬಲ ಗೊತ್ತಾಯಿತು. ಈಗ ನನ್ನ ಶೂಲಕ್ಕೆ ಆಹುತಿಯಾಗಿ ಬಿಡುವಿಯಂತೆ!" ಎಂದು ಹೇಳಿ, ತನಗಿಂತಲೂ ಹೆಚ್ಚು ಉದ್ದವಾದ ಶೂಲವನ್ನೆತ್ತಿ ಒಳ್ಳೆಯ ಶಕ್ತಿಯಿಂದ ಹನುಮಂತನ ಮೇಲೆ ಪ್ರಯೋಗಿಸಿದನು. ಅದನ್ನು ಹನುಮಂತನು ಹಿಡಿದು ಒಣಗಿತ ಕಡ್ಡಿ

ಮುರಿದ ಹಾಗೆ ಟಪ್ಪನೆ ಮುರಿದು ದೂರ ಬಿಸುಟನು. "ಭಲೇ !" ಎಂದು ಶತಕಂಠರಾವಣನು ಹನುಮಂತನ ಮೇಲೆ ಒನಕೆ, ಕೊಡಲಿ, ಖಡ್ಗ ಮೊದಲಾದ ಅನೇಕ ಆಯುಧಗಳನ್ನು ಪ್ರಯೋಗಿಸಿದನು. ಎಲ್ಲವನ್ನೂ ಹನುಮಂತನು ಮುರಿದು ಹಾಕಿದನು. ರಾಮನು ಹನುಮಂತನ ಪರಾಕ್ರಮಗಳನ್ನು ನೋಡಿ ಆನಂದಿಸುತ್ತ, ತಾನೊಂದು ಬಿಲ್ಲನ್ನು ತೆಗೆದುಕೊಂಡು ಶತಕಂಠನ ಮುಂದೆ ಯುದ್ಧಕ್ಕೆ ನಿಂತನು. ರಾಮನ ಜತೆಯಲ್ಲಿ ವಿಭೀಷಣನು ಬಿಲ್ಲು ಬಾಣಗಳೊಂದಿಗೆ ಯುದ್ಧಕ್ಕೆತೊಡಗಿದನು. ಶತಕಂಠನು ಅವರಿಬ್ಬರ ಬಾಣ ಪರಂಪರೆಗಳನ್ನು ನಡುದಾರಿಯಲ್ಲೇ ಮುರಿದು ಹಾಕುತ್ತ, ಕಾಲಿಂದೊದ್ದು ರಾಮವಿಭೀಷಣರಿಬ್ಬರೂ ಲಂಕೆಯಲ್ಲಿ ಹೋಗಿ ಬೀಳುವಂತೆ ಮಾಡಿದನು.

ಆಗ ಹನುಮಂತನು ತನ್ನ ಬಾಲವನ್ನು ನಾಲ್ಕು ಸಮುದ್ರಗಳ ಮೇಲಿನಿಂದ ಸೇತುವಿನ ಹಾಗೆ ಅಡ್ಡ ಮಲಗಿಸಿಟ್ಟನು. ಅದರ ದಪ್ಪವು ಅಗಲವಾದ ಹೆದ್ದಾರಿಯಷ್ಟಿದ್ದಿತು. ರಾಮನೂ ವಿಭೀಷಣನೂ ಅದರ ಮೇಲೇರಿಕೊಂಡು ಬಂದುಬಿಟ್ಟರು. ಶತಕಂಠನೊಂದಿಗೆ ರಾಮನ ಯುದ್ಧವು ಮತ್ತೆ ಪ್ರಾರಂಭವಾಯಿತು. ಅವರ ಜತೆಯಲ್ಲಿ ವಾನರರು ಮರಗಳನ್ನೂ ಕಲ್ಲುಗಳನ್ನೂ ಬಿಸುಟರು. ಶತಕಂಠನು ಎಲ್ಲವನ್ನೂ ನುಗ್ಗುನುರಿ ಮಾಡುತ್ತಲೇ ಬಂದನು. ಶತಕಂಠನಿಂದ ಹೊರಡುವ ಇದಿರೇಟುಗಳನ್ನು ತಾಳಿಕೊಳ್ಳಲಾಗದೆ, ಅಂಗದ, ನಳ, ನೀಲ, ಋಕ್ಷಜ ಮೊದಲಾದ ಪ್ರಮುಖ ವಾನರರೇ ಓಡಿ ಹೋಗುವಾಗ ಉಳಿದವರ ಪಾಡೇನು ? ರಾಮನ ಮೂವರು ತಮ್ಮಂದಿರೂ ರಣರಂಗದಿಂದ ಓಡಿಹೋದರು.

ಆಗ ರಾಮನು ಸೀತೆಯೊಂದಿಗೆ ಹನುಮಂತನ ಮೇಲೆ ಏರಿ, ಶತಕಂಠನೊಂದಿಗೆ ಯುದ್ಧ ಮಾಡ ತೊಡಗಿದನು. ಶತಕಂಠನು ಅವನನ್ನು ನೋಡಿ. "ಎಲೋ ರಾಮಾ, ನನ್ನೊಂದಿಗೆ ಯುದ್ಧವೆಂದರೆ



ರಾವಣನೊಂದಿಗೆ ಯುದ್ಧವೆಂದು ಕೊಂಡೆಯಾ ? ಈ ಕೋತಿಯ ಮೇಲೆ ಏರಿ ಇಷ್ಟು ದೂರದವರೆಗೆ ನೀನೇ ಬರುವ ಅಗತ್ಯವೇನಿತ್ತು ? ಅದರ ಮೇಲೆ ಸೀತೆಯನ್ನು ಕೂಡಾ ಕರೆದು ತಂದಿರುವೆ ! ನಾನು ರಾವಣನಂಥವನೆಂದು ಮಾಡಿದೆಯಾ ?" ಎಂದು ಆಕ್ಷೇಪಿಸಿದನು.

ರಾಮನು "ಶತಕಂಠಾ ! ನಿನ್ನಿಷ್ಟದಂತೆ ನೀನು ನನ್ನ ಮೇಲೆ ದಂಡೆತ್ತಲು ನೋಡಿದೆ. ನಿನಗೆ ಆ ಶ್ರಮ ಬೇಡವೆಂದು ನಾನೇ ಬಂದೆ. ನಿನ್ನ ರಾಜ್ಯವನ್ನು ನೋಡಲು ಸೀತೆಯೂ ಬಂದಳು. ಸಿದ್ಧನಾಗು !" ಎಂದು ಅವನ ಮೇಲೆ ಬಾಣಗಳನ್ನೂ ಮಂತ್ರಾಸ್ತ್ರಗಳನ್ನೂ ಪ್ರಯೋಗಿಸಿದನು. ಅವೆಲ್ಲವೂ ಅವನ ಮೇಲೆ ವ್ಯರ್ಥವಾಗುತ್ತಿರಲು, ಶತಕಂಠನು ಕೋಟಿ ಸಂಖ್ಯೆಯಲ್ಲಿ ತನ್ನ ಮುಂದಿರುವಂತೆ ರಾಮನಿಗೆ ತೋರಿ ಬಾಣಗಳ ಪರಂಪರೆಗೇ ತೊಡಗಿದನು. ಈ ಸಂದರ್ಭದಲ್ಲಿ ಹನುಮಂತನಿಗೆ ಪ್ರಚಂಡವಾಗಿ



40-7

ಆವೇಶ ಬಂದಿತು. ಬಿರುಗಾಳಿಯಂತೆ ಮುನ್ನುಗ್ಗಿ ಶತಕಂಠನ ರಾಕ್ಷಸ ಸೈನ್ಯವನ್ನು ಪೂರ್ತಿ ಹತ ಮಾಡಿದನು. ಆ ಸಮಯದಲ್ಲಿ ರಾಮನು ಸೀತೆಯ ಕೈಗೆ ಬಿಲ್ಲು ಬಾಣಗಳನ್ನು ಕೊಟ್ಟು ತಾನು ವಿಶ್ರಾಂತಿಯಾಗಿದ್ದನು. ಸೀತೆಗೂ ಯುದ್ಧಾವೇಶ ಬಂದಿತ್ತು. ಸೀತೆಯನ್ನು ಕೊಂದರೆ ರಾಮನು ಪಲಾಯನ ಮಾಡುವನೆಂದುಕೊಂಡು ಶತಕಂಠನು ಅವಳ ಮೇಲೆ ಬಾಣ ಪ್ರಯೋಗ ಮಾಡಿದನು. ಹನುಮಂತನು ಕದಲಿ ಅವನ ಗುರಿಗಳನ್ನು ತಪ್ಪಿಸಿದನು. ಸೀತೆ ಬಿಲ್ಲಿನಲ್ಲಿ ರಾಮಬಾಣಗಳನ್ನು ಹೂಡಿ ಪ್ರಯೋಗಿಸ ತೊಡಗಿದಳು. "ರಾಮನು ಸತ್ಯವಾದಿಯಾಗಿದ್ದರೆ, ನಾನು ಪತಿವ್ರತೆ ನಿಜವಾದರೆ ಈ ಬಾಣದಿಂದ ಇವನು ಸಾಯಲಿ!" ಎಂದು ಸೀತೆ ಬಿಟ್ಟ ಒಂದು ಬಾಣದಿಂದ ಶತಕಂಠನು ಸತ್ತುಬಿದ್ದನು. ಸೀತೆ ಬಿಲ್ಲು ಬಾಣಗಳನ್ನು ರಾಮನಿಗೆ ಒಪ್ಪಿಸಿ ನಮಸ್ಕಾರ ಮಾಡಿದಳು.

ರಾಮನು ತನ್ನ ಮಣಿಹಾರವನ್ನು ಸೀತೆಗೆ ಕೊಟ್ಟನು. ತಮ್ಮೆಲ್ಲರನ್ನೂ ಹೊತ್ತುಕೊಂಡು ಬಂದು, ಶತಕಂಠರಾವಣನ ಸಂಹಾರಕ್ಕೆ ಕಾರಣವಾದ ಹನುಮಂತನಿಗೇ ಆ ಹಾರವನ್ನು ಕೊಡಲು ಸೀತೆ ಹೇಳಿದಳು. ರಾಮನು ಕೊಟ್ಟ ಹಾರವನ್ನು ಹನುಮಂತನು ಧರಿಸಿಕೊಂಡು, ಆತ್ಮಾನಂದದಿಂದ "ಸೀತಾ ರಾಮರು ಪ್ರಸಾದಿಸಿದ ಈ ಹಾರವು ನನ್ನ ವಕ್ಷಸ್ಥಲದ ಮೇಲೆ ಪ್ರಕಾಶಿಸುತ್ತ, ನನ್ನ ಹೃದಯದಲ್ಲಿರುವ ಸೀತಾ ರಾಮರನ್ನು ಯಾವಾಗಲೂ ಪ್ರತಿಫಲಿಸಿಕೊಂಡಿರುತ್ತದೆ" ಎಂದನು.

ಎಲ್ಲರೂ ತಿರುಗಿ ಅಯೋಧ್ಯೆಗೆ ಹೊರಟರು. ರಾಮನಿಂದ ಅಪ್ಪಣೆ ಪಡೆದು ವಿಭೀಷಣನು ತನ್ನ ರಾಕ್ಷಸರೊಂದಿಗೆ ಲಂಕೆಗೆ ಹೋದನು. ಸುಗ್ರೀವನೇ ಮೊದಲಾದ ವಾನರರು ಕಿಷ್ಕಿಂಧೆಗೆ ಹೋದರು. ಹನುಮಂತನು ರಾಮನ ಹತ್ತಿರವೇ ಇದ್ದುಬಿಟ್ಟನು.

ಶತಕಂಠ ರಾವಣನ ಸಂಹಾರದ ಅನಂತರ ರಾಮನು ನಿಷ್ಕಂಟಕವಾಗಿ, ಆದರ್ಶಪ್ರಾಯವಾಗಿ ರಾಜ್ಯಭಾರ ಮಾಡತೊಡಗಿದನು.

ರಾಮನ ರಾಜ್ಯದಲ್ಲಿ ಶೋಕವೂ, ಕ್ರೋಧವೂ, ವೃದ್ಧಾಪ್ಯ ಬಾಧೆಯೂ, ವೈರವೂ, ಲೋಭತ್ವವೂ, ಪ್ರಜಾಸಂಕ್ಷೋಭವೂ ಹೇಗಿರುವುದೆಂದು ಯಾರಿಗೂ ತಿಳಿಯದಂತಾಯಿತು.

ರಾಮನ ಸೇವೆಯಲ್ಲಿ ಅಯೋಧ್ಯೆಯಲ್ಲಿರುವ ಹನುಮಂತನಿಗೆ, ಕೆಲವು ದಿನಗಳ ಮೇಲೆ ತನ್ನ ತಾಯಿಯಾದ ಅಂಜನಾದೇವಿಯನ್ನು ನೋಡಬೇಕೆನಿಸಿತು. ಅವನು ರಾಮನ ಅನುಜ್ಞೆ ಪಡೆದುಕೊಂಡು ಗಂಧಮಾದನ ಪರ್ವತದ ಹತ್ತಿರವಿರುವ ಅಂಜನಾದೇವಿಯ ಆಶ್ರಮಕ್ಕೆ ಹೊರಟನು.

